KA / BG-GPO / 2515 / WPP-47 / 2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೩ | ಬೆಂಗಳೂರು, ಗುರುವಾರ ಆಗಸ್ಟ್ ೭, ೨೦೦೮ (ಶ್ರಾವಣ ೧೬, ಶಕ ವರ್ಷ ೧೯೩೦) | ಸಂಚಿಕೆ ೩೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ಸೇಡಂ ಪಟ್ಟಣಕ್ಕೆ ಸುಧಾರಿತ ಕುಡಿಯುವ ನೀರು ಸರಬರಾಜು ಮಾಡುವ ಯೋಜನೆಯ ಅಂದಾಜು ವೆಚ್ಚ ರೂ. 911.00 ಲಕ್ಷಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: KWB/CE(N)/DCE-2/TA-3/AE-3/352/2007-08, dt: 3-5-1007.

**ಪ್ರಸ್ತಾವನೆ :**

ಸೇಡಂ ಪಟ್ಟಣವು ಗುಲ್ಬರ್ಗಾ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದೆ. 2001ರ ಜನಗಣತಿಯ ಪ್ರಕಾರ ಈ ಪಟ್ಟಣದ ಜನಸಂಖ್ಯೆಯು 31,529 ಇದ್ದು, ಈಗಿನ ಜನಸಂಖ್ಯೆಯು ಸುಮಾರು 35,000 ಇರುತ್ತದೆ. 2021ರ ವೇಳೆಗೆ ಈ ಜನ ಸಂಖ್ಯೆಯು 46,850 ಆಗಬಹುದೆಂದು ಅಂದಾಜಿಸಲಾಗಿದೆ. ಸೇಡಂ ಪಟ್ಟಣಕ್ಕೆ ಸಧ್ಯದ ನೀರು ಸರಬರಾಜು ಯೋಜನೆಯನ್ನು ಕಾಗಿನಾ ನದಿಯನ್ನು ಮೂಲವಾಗಿಟ್ಟುಕೊಂಡು 1996ರಲ್ಲಿ ರೂ. 154.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಚಾಲ್ತಿಗೊಳಿಸಲಾಗಿದೆ. ಪ್ರಸ್ತುತ ಚಾಲ್ತಿಯಲ್ಲಿರುವ ನೀರು ಸರಬರಾಜು ಯೋಜನೆಯು ಅಂದಾಜಿಸಲಾದ 40,000 ಜನಸಂಖ್ಯೆಗೆ ವಿನ್ಯಾಸಿಸಲಾಗಿದೆ.

ಈ ಪಟ್ಟಣದ ಜನಸಂಖ್ಯೆಯು ಗಣನೀಯವಾಗಿ ಹೆಚ್ಚಾಗುತ್ತಿರುವುದರಿಂದ ಮತ್ತು ಹೊಸ ಪ್ರದೇಶಗಳನ್ನು ಅಭಿವೃದ್ಧಿ ಪಡಿಸುತ್ತಿರುವುದರಿಂದ ಸೇಡಂ ಪಟ್ಟಣಕ್ಕೆ ನೀರು ಸರಬರಾಜು ಯೋಜನೆಯನ್ನು ಅಭಿವೃದ್ಧಿಪಡಿಸುವುದು ಅವಶ್ಯವಾಗಿದೆ. ಸೇಡಂ ಪಟ್ಟಣಕ್ಕೆ ಎರಡು ನದಿ ಮೂಲಗಳಾದ ಕಾಗಿನಾ ಮತ್ತು ಕಮಲಾವತಿ ನದಿಗಳು ಬೇಸಿಗೆಯಲ್ಲಿ ಬತ್ತಿ ಹೋಗುತ್ತವೆ. ಈ ಸಮಸ್ಯೆಯಿಂದ ಪಾರಾಗಲು ಕಾಗಿನಾ ನದಿಗೆ ಅಡ್ಡಲಾಗಿ ಸಣ್ಣ ನೀರಾವರಿ ಇಲಾಖೆಯು ಕೈಗೊಳ್ಳಲು ಉದ್ದೇಶಿಸಲಾಗಿರುವ ಕಾಚೂರು ಬ್ಯಾರೇಜ್‌ನ್ನು ಈಗ ನೀರಿನ ಮೂಲವೆಂದು ಪರಿಗಣಿಸಿ, ಈ ಯೋಜನೆಗೆ ನೀರನ್ನು ಪಡೆಯಬಹುದಾಗಿದೆ. ಸೇಡಂ ಪಟ್ಟಣಕ್ಕೆ ನೀರು ಸರಬರಾಜು ಅಭಿವೃದ್ಧಿ ಯೋಜನೆಯನ್ನು 2036ರಲ್ಲಿ ಇರಬಹುದು ಎಂದು ಅಂದಾಜಿಸಲಾದ ಜನಸಂಖ್ಯೆ 63,055ಕ್ಕೆ ವಿನ್ಯಾಸಿಸಿ, 2006–07ರ ದರಪಟ್ಟಿಯ ಪ್ರಕಾರ ರೂ. 911.00 ಲಕ್ಷಗಳಿಗೆ ಅಂದಾಜು ಪಟ್ಟಿಯನ್ನು ತಯಾರಿಸಲಾಗಿದೆ.

ಈ ಯೋಜನೆಯನ್ನು ನಗರ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರು ಸೇಡಂ ಪಟ್ಟಣಕ್ಕೆ ಸುಧಾರಿತ ಕುಡಿಯುವ ನೀರು ಸರಬರಾಜು ಮಾಡುವ ಯೋಜನೆಯನ್ನು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿರುತ್ತಾರೆ.

| | |
|---|---|
| ಹಣಕಾಸು ಸಂಸ್ಥೆಗಳಿಂದ ಸಾಲ (ಶೇ. 50) | ರೂ. 455.50 ಲಕ್ಷ |
| ಸರ್ಕಾರದ ವಂತಿಗೆಯಿಂದ (ಶೇ. 50) | ರೂ. 455.50 ಲಕ್ಷ |
| **ಒಟ್ಟು** | **ರೂ. 911.00 ಲಕ್ಷ** |

ಈ ಯೋಜನೆಯನ್ನು 2007–08ನೇ ಸಾಲಿನ ಮಂಡಳಿಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಸೇರಿಸಿ ರೂ. 304.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 39 ಯುಡಬ್ಲ್ಯೂಎಸ್ 2005 ಬೆಂಗಳೂರು, ದಿನಾಂಕ: 3ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸೇಡಂ ಪಟ್ಟಣಕ್ಕೆ ಸುಧಾರಿತ ಕುಡಿಯುವ ನೀರು ಸರಬರಾಜು ಮಾಡುವ ಯೋಜನೆಯ ಅಂದಾಜು ವೆಚ್ಚ ರೂ. 911.00 ಲಕ್ಷಗಳಿಗೆ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ನಗರ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು, ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. No additionality for escalation or tender premium will be allowed. The ULB or implementing agency has to bear the costs.
2. Government Guarantee will not be given.
3. For O & M, the ULB has to utilize its revenue sources or KUWS & DB has to factor it in if Administrarive Department decides to give maintenance also to it.
4. ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.
5. ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
6. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ FD 548 Exp-9/2007, ದಿನಾಂಕ 12–9–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 67

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

## HEALTH AND FAMILY WELFARE SECRETARIAT

**Sub :** According administrative approval to the estimates for Renovation and Repairs of 65 Primary Health Centres at 8 districts of the state under SICF component of the World Bank assisted KHSDRP –reg.

**Read :** 1. Government Order No. KFW/KHSDRP/SECT/1/2006, dated 30-12-2006.
2. Notification No. DPAR/7/ARB/2007, dt 12-10-2007.

**Preamble:**

Government of Karnataka have accorded approval to implement the Karnataka Health System Development & Reform Project with World Bank assistance under Government Order No. KFW/KHSDRP/SECT/1/2006, dated 30-12-2006. The Project cost is Rs. 897.79 crores.

The Project has 3 main components out of which Service Improvement Challenge Fund (SICF) is an important Sub-Component under "Innovations in Service Delivery and Health Financing". It is proposed to take up renovation/repais of 212 Primary Health Centres, 8 Primary Health Units and 217 ANM Sub Centres across the State in 10 districts, in the 1st Phase under the SICF Component of the project. The detailed estimates in respect of 65 Primary Health Centres in 8 districts prepared and submitted by the Supreintending Engineer of KHSDRP.

Based on the guidelines given by the World Bank, the Project Administrator, Karnataka Health Systems Development & Reformsf Project, Bangalore has accorded administrative approval to the detailed estimates for renovation and repair to 65 Primary Health Centres in 8 districts, amounting a total of Rs. 632.78 lakhs.

Hence the following order.

**Govt. Order No. HFW/KHSDRP/SE/SICF/200708, Bangalore, Dated 2nd April 2007**

Under the circumstances explained in the preamble, Government are pleased to accord administrative approval to the individual estimates of renovation and repairs of 65 Primary Health Centres in 8 districts as per the table given below, at a total estimated cost of Rs. 632.78 (Rupees six hundred and thirty two point seventy eight lakhs) only.

**List of Public Health Centres Selected for the Renovation work under Service Improvement Challenge Fund (SICF) – First Phase**

(Rs. in lakhs)

| | **Estimates Received** | | | |
|---|---|---|---|---|
| Sl. No. | District | Taluk | Name of Work in PHC's/PHU's | Estimated Cost |
| 1 | Bagalkot | Badami | Estimates for providing and construction of compound wall, painting, water supply and electrification to PHC building at Mushtigeri | 6.00 |
| 2 | Bagalkot | Badami | Estimates for providing and construction of compound wall, painting and electrification to PHC building at Kakanur | 12.00 |
| 3 | Bagalkot | Badami | Estimates for repairs to quarters UGD Water suply, Painting, Electrification to PHC building at Pattadkal | 15.00 |
| 4 | Bagalkot | Bagalkot | Estimates for repairs to quarters UGD Water suply, Painting, Electrification and Providing and laying slab to quarters for PHC at Bewoor | 20.00 |
| 5 | Bagalkot | Bagalkot | Estimates for providing and construction of compound wall, painting, water supply and electrification to PHC building at Kaladagi | 10.50 |
| 6 | Bagalkot | Hungund | Estimates for providing and construction of comopound wall, painting, water supply and electrification to PHC building at Gudur S.B. | 12.00 |
| 7 | Bagalkot | Jamakhandi | Estimates for repairs to water suply, sanitation and existing OT Blook at PHC Savalgi | 5.00 |
| 8 | Bagalkot | Jamakhandi | Estimates for repairs to water supply sanitation and WPC to PHC at Teredal | 7.00 |
| 9 | Bellary | Bellary | Speical Repairs to PHC at Emmiganur | 8.00 |
| 10 | Bellary | Bellary | Special Repairs to PHC at Roopanagudi | 19.35 |
| 11 | Bellary | Bellary | Special Repairs to PHC at Siddammanahalli | 8.00 |
| 12 | Bellary | Bellary | Special Repairs to PHC at Moka | 8.00 |
| 13 | Bellary | Bellary | Repairs to PHC at Chellagurki | 10.25 |
| 14 | Bellary | Hagaribomma-nahalli | Repairs quarters to PHC at Hampasagar | 14.42 |
| 15 | Bellary | Hospet | Estimate for PHC at Devasamudra | 12.00 |
| 16 | Bellary | Kudligi | Construction of Compound wall to PHC at Ujjini | 10.00 |
| 17 | Bellary | Kudligi | Repairs to quarters at PHC Hudem | 8.35 |
| 18 | Bellary | Kudligi | Repairs to quarters at PHC Hosahalli | 8.40 |
| 19 | Bellary | Sandur | Special Repairs to PHC at Bandri | 8.00 |

| Sl. No. | District | Taluk | Name of Work in PHC's/PHU's | Estimated Cost |
|---|---|---|---|---|
| 20 | Bellary | Siraguppa | Special Repairs to PHC at Karur | 19.35 |
| 21 | Bellary | Siraguppa | Special Repairs to PHC at Kuruvalli | 8.00 |
| 22 | Bellary | Siraguppa | Special to PHC at Sirigere | 19.35 |
| 23 | Bellary | Siraguppa | Special Repairs to PHC at Raravi | 8.00 |
| 24 | Bellary | Siraguppa | Special Repairs to PHC at Ravihal | 8.00 |
| 25 | Bidar | Aurad | Estimate for Renovation and Repairs to PHC Building at Santapur | 19.20 |
| 26 | Bidar | Basavakalyana | Estimate for Renovation and Repairs to PHC Building at Ujlamba | 19.00 |
| 27 | Bidar | Bhalki | Estimate for Renovation and Repairs to pHC Building at Halbarga | 17.10 |
| 28 | Bidar | Humnabad | Estimate for Renovation and Repairs to PHC Building at Hudgi | 19.80 |
| 29 | Chamaraj-nagar | Chamarajnagar | Estimate for Construction of Compound wall Sump tank and Sinking of Borewell and Repairs and improvements works to PHC at Halikerebundi | 14.00 |
| 30 | Chamarajnagar | Chamarajnagar | Estimate for Construction of balance Compound wall and repair works to PHC at Muthuchandakavadi | 9.90 |
| 31 | Chamrajnagar | Chamarajnagar | Estimate for Roof Treatment. Construction of Sump Tank repair works and sinking of borewell at PHC at Bisalvadi | 7.45 |
| 32 | Chamarajnagar | Chamarajnagar | Estimate for Construction of Compound Wall repairs and Improvements works to PHC at Udigala | 7.25 |
| 33 | Chamarajnagar | Chamarajnagar | Estimate for Construction of Compound Wall repairs and Improvements works to PHC at Arkalawadi | 9.70 |
| 34 | Chamarajnagar | Chamarajnagar | Estimate for Roof Treatment Construction of sump Tank repair works PHC at Venkataiahaa Chatra | 5.00 |
| 35 | Chamarajnagar | Chamarajnagar | Estimate for Renovation of PHC at Honagannur | 6.30 |
| 36 | Chamarajnagar | Gundalpet | Estimate for Renovation of PHC at Hangala | 5.07 |
| 37 | Chamarajnagar | Gundalpet | Estimate for Renovation of PHC at Kaggaladahundi | 7.03 |
| 38 | Chamarajnagar | Gundalpet | Estimate for Renovation of PHC at Horayala | 5.38 |
| 39 | Chamarajnagar | Gundalpet | Estimate for Renovation of PHC at Madapatna | 6.87 |
| 40 | Chamarajnagar | Gundalpet | Estimate for Renovation of PHC at Bommanahali | 7.11 |
| 41 | Chamarajnagar | Gundalpet | Estimate for Renovation of PHC at Balachavadi | 5.00 |
| 42 | Chamarajnagar | Kollegala | Estimate for Renovation works to existing PHC at M M Hills in Kollegal taluk | 5.25 |

| Sl. No. | District | Taluk | Name of Work in PHC's/PHU's | Estimated Cost |
|---|---|---|---|---|
| 43 | Chamarajnagar | Kollegala | Estimate for Renovation works to existing PHC at Ramapura in Kollegal taluk | 8.60 |
| 44 | Chamarajnagar | Kollegala | Estimate for Renovation works to existing PHC at Chilakavadi in Kollegal taluk | 9.40 |
| 45 | Dakshina Kannada | Mangalore | Estimate for Renovation of PHC Building at Surathkal | 23.80 |
| 46 | Dakshina Kannada | Mangalore | Estimate for Renovation of PHC Building at Ullal | 14.20 |
| 47 | Gadag | Mundargi | Estimate for repairs to sanitary and electrical and WPC and Painting at PHC Bagewadi | 5.30 |
| 48 | Gadag | Shirahatti | Estimate for Repairs to PHC at Bellati | 5.50 |
| 49 | Hassan | Arasikere | Estimate for Renovation of existing PHC at D M Kurke | 18.00 |
| 50 | Hassan | Arasikere | Estimate for Renovation of existing PHC at Kanakatte | 16.00 |
| 51 | Hassan | Sakaleshpur | Estimate for Improvement and Repairs to PHC at Kalagalale | 15.00 |
| 52 | Hassan | Sakaleshpur | Estimatef for Improvement and Repairs to PHC at Kyamanahalli | 7.80 |
| 53 | Hassan | Sakaleshpur | Estimate for Improvement and Repairs to PHC at Attihalli | 20.00 |
| 54 | Udupi | Karkala | Estimate for Renovation and Repairs to existing PHC at Ajekar | 8.00 |
| 55 | Udupi | Kundapur | Estimate for Renovation of existing PHC at Haladi | 20.00 |
| 56 | Udupi | Kundapur | Estimate for Renovation of existing PHC at Nada | 5.65 |
| 57 | Udupi | Kundapur | Estimate for Renovation of existing PHC at Gangolli | 9.15 |
| 58 | Udupi | Udupi | Estimate for Renovation and Repairs to existing PHC at Manipura | 5.00 |
| | | | | **632.78** |

The above works shall be taken up as per World Bank's Procurement guidelines.

The above expenditure is debitable to the Head of account 2210-06-800-0-85-059 (SICF-other expenses).

By order and in the name of the President of India,

PR. 619

**SUSHAMA GODBOLE**
Deputy Secretary to Government,
KHSDRP
Health and Family Welfare Department

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ಕೇಂದ್ರ ಸರ್ಕಾರದ ತ್ವರಿತ ನೀರು ಸರಬರಾಜು ಯೋಜನೆಯಡಿ ಸೋಮವಾರಪೇಟೆ ಪಟ್ಟಣ ಮತ್ತು ಸುತ್ತಮುತ್ತಲಿನ 5 ಹಳ್ಳಿಗಳಿಗೆ ಹಾರಂಗಿ ನದಿಯಿಂದ ನೀರು ಸರಬರಾಜು ಮಾಡುವ ರೂ. 610.00 ಲಕ್ಷಗಳ ಅಂದಾಜು ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ KWB/ CE(N)/DCE-2/TA-4/AE-6/3547/2005-06, dt: 17-1-2006.

**ಪ್ರಸ್ತಾವನೆ :**

ಸೋಮವಾರಪೇಟೆ ಪಟ್ಟಣವು ಕೊಡಗು ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಹಾಲಿ ಈ ಪಟ್ಟಣಕ್ಕೆ ಕಕ್ಕೆ ಹೊಳೆ ಹಾಗೂ ದೂದಗಲ್ ಹೊಳೆ ಮೂಲದಿಂದ ನೀರು ಸರಬರಾಜು ಮಾಡಲಾಗುತ್ತಿದೆ. ಬೇಸಿಗೆ ಸಮಯದಲ್ಲಿ ಈ ಮೂಲಗಳು ಬತ್ತಿಹೋಗಿ ಪಟ್ಟಣಕ್ಕೆ ನೀರಿನ ಅಭಾವ ಉಂಟಾಗುತ್ತಿದೆ. ಆದುದರಿಂದ ಹಾರಂಗಿ ನದಿ ಮೂಲದಿಂದ ಸೋಮವಾರಪೇಟೆ ಪಟ್ಟಣ ಮತ್ತು ಸುತ್ತಮುತ್ತಲಿನ 5 ಹಳ್ಳಿಗಳಿಗೆ ನೀರು ಸರಬರಾಜು ಮಾಡಲು ರೂ. 610.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಶಾಶ್ವತ ಕುಡಿಯುವ ನೀರು ಸರಬರಾಜು ಯೋಜನೆ ರೂಪಿಸಲಾಗಿದೆ.

ಈ ಯೋಜನೆಯಲ್ಲಿ 2031 ಇಸವಿಗೆ ಊಹಿಸಲಾದ ಸೋಮವಾರಪೇಟೆ ಪಟ್ಟಣದ 7970 ಜನಸಂಖ್ಯೆಯಲ್ಲಿ ಶೇಕಡಾ 70 ಜನಸಂಖ್ಯೆಗೆ ತಲಾ 70 ಲೀಟರ್‌ನಂತೆ ಶೇಕಡ 30 ಜನಸಂಖ್ಯೆಗೆ ತಲಾ ದಿನಂಪ್ರತಿ 40 ಲೀಟರ್‌ನಂತೆ ಹಾಗೂ 5 ಹಳ್ಳಿಗಳ 18,907 ಜನಸಂಖ್ಯೆಗೆ ತಲಾ ದಿನಂಪ್ರತಿ 25 ಲೀಟರ್‌ನಂತೆ ನೀರು ಸರಬರಾಜು ಮಾಡಲು ಉದ್ದೇಶಿಸಲಾಗಿದೆ. ಈ ಯೋಜನೆಗೆ ಕೇಂದ್ರ ಸರ್ಕಾರದ ತ್ವರಿತ ನೀರು ಸರಬರಾಜು ಯೋಜನೆಯಡಿ, ಆದೇಶ ಸಂಖ್ಯೆ, Q-12045/11(2)/2004/CPHEEO, ದಿನಾಂಕ 18–7–2006ರಲ್ಲಿ ತಾಂತ್ರಿಕ ಅನುಮೋದನೆ ದೊರೆತಿದ್ದು, ಇದರಲ್ಲಿ ಕೇಂದ್ರ ಸರ್ಕಾರದ ವಂತಿಕೆಯನ್ನು ಮೂಲ ಅಂದಾಜಿನ ಅನುಮೋದನೆಯಂತೆ ರೂ. 91.92 ಲಕ್ಷಗಳಿಗೆ ಸೀಮಿತಗೊಳಿಸಿ, ಉಳಿದ ಹಣವನ್ನು ರಾಜ್ಯ ಸರ್ಕಾರದಿಂದ ಭರಿಸಬೇಕೆಂದು ಸೂಚಿಸಿರುತ್ತಾರೆ.

ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ಇವರು, ಸೋಮವಾರಪೇಟೆ ಪಟ್ಟಣ ಮತ್ತು ಮಾರ್ಗ ಮಧ್ಯದ 5 ಹಳ್ಳಿಗಳಿಗೆ ಹಾರಂಗಿ ನದಿ ಮೂಲದಿಂದ ತ್ವರಿತ ನೀರು ಸರಬರಾಜು ಯೋಜನೆಗೆ ಆಡಳಿತಾತ್ಮಕ ಅನುಮೋದನೆ ಕೋರಿ ಯೋಜನೆಯನ್ನು ಕೆಳಕಂಡ ಆರ್ಥಿಕ ಮಾದರಿಯಲ್ಲಿ ಕೈಗೆತ್ತಿಕೊಳ್ಳಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | ಲಕ್ಷ ರೂ.ಗಳಲ್ಲಿ |
|---|---|
| ರಾಜ್ಯ ಸರ್ಕಾರದ ವಂತಿಕೆ | ರೂ. 406.08 |
| ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ವಂತಿಕೆ | ರೂ. 112.00 |
| ಭಾರತ ಸರ್ಕಾರದ ವಂತಿಕೆ | ರೂ. 91.92 |
| **ಒಟ್ಟು** | **ರೂ. 610.00** |

2007–08ನೇ ಸಾಲಿನ ಮಂಡಳಿಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಸದರಿ ಯೋಜನೆಗೆ ರೂ. 400–00 ಲಕ್ಷಗಳ ಅನುವು ಮಾಡಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 58 ಯುಡಬ್ಲ್ಯೂಎಸ್ 2004 ಬೆಂಗಳೂರು, ದಿನಾಂಕ: 3ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯ್ಲಲಿ ಸೋಮವಾರಪೇಟೆ ಪಟ್ಟಣ ಮತ್ತು ಸುತ್ತಮುತ್ತಲಿನ 5 ಹಳ್ಳಿಗಳಿಗೆ ಹಾರಂಗಿ ನದಿಯಿಂದ ನೀರು ಸರಬರಾಜು ಮಾಡುವ ಯೋಜನೆಯನ್ನು ರೂ. 610.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಕೇಂದ್ರ ಸರ್ಕಾರದ ತ್ವರಿತ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು, ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. No additionality entertained.
2. Escalation and tender premium have already been factored in the estimate. So, no further tender premium or escalation will be allowed.
3. ಸೋಮವಾರಪೇಟೆ ಪಟ್ಟಣವು maintenance ವೆಚ್ಚ ಮಾಡತಕ್ಕದ್ದು.
4. To prevent cost escalation quick execution is emphasized.
5. ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.
6. ಸದರಿ ಕಾಮಗಾರಿಯನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
7. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ FD 559 Exp-9/2007 ದಿನಾಂಕ 19–9–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 66

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ

**ವಿಷಯ :** ಗುಲ್ಬರ್ಗ ಜಿಲ್ಲೆಯ ಚಿತ್ತಾಪುರ ತಾಲೋಕಿನ ವಾಡಿ ಪಟ್ಟಣಕ್ಕೆ, ಎ.ಸಿ.ಸಿ. ಕಾಲೋನಿ ಹಾಗೂ ಕುಂದನೂರು ಗ್ರಾಮಕ್ಕೆ ನೀರು ಸರಬರಾಜು ಅಭಿವೃದ್ಧಿಗೊಳಿಸುವ ಯೋಜನೆಯನ್ನು ರೂ. 1250–00 ಲಕ್ಷಗಳ ಅಂದಾಜು ವೆಚ್ಚಕ್ಕೆ ಆಡಳಿತಾತ್ಮಕ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** 1. ಅಧ್ಯಕ್ಷರು ಮತ್ತು ವ್ಯ.ನಿ. ಕನನೀಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ: KWB/ CE(N)/DCE-2/TA-3/AE-3/2411/2005-06/ dt: 14-10-2005 ಮತ್ತು 105/05–09–2007.

**ಪ್ರಸ್ತಾವನೆ :**

ಚಿತ್ತಾಪುರ ತಾಲೋಕಿನ ವಾಡಿ ಪಟ್ಟಣವು ಗುಲ್ಬರ್ಗ ಜಿಲ್ಲೆಯ ಪ್ರಮುಖ ಕೈಗಾರಿಕ ಪಟ್ಟಣಗಳಲ್ಲಿ ಒಂದಾಗಿದೆ. 2001ರ ಜನಗಣತಿಯ ಪ್ರಕಾರ ಈ ಪಟ್ಟಣದ ಜನಸಂಖ್ಯೆಯು 31,611 ಆಗಿರುತ್ತದೆ ಮತ್ತು ಈಗಿನ ಜನಸಂಖ್ಯೆಯು ಸುಮಾರು 34,000 ಇರುತ್ತದೆ. 2001ರ ಜನಗಣತಿ ಪ್ರಕಾರ ಕುಂದನೂರು ಗ್ರಾಮದ ಜನಸಂಖ್ಯೆ 2100, ಮತ್ತು ಎ.ಸಿ.ಸಿ. ಸಿಮೆಂಟ್ ಇಂಡಸ್ಟ್ರೀ ಕಾಲೋನಿಯ ಜನಸಂಖ್ಯೆ 4700 ಆಗಿರುತ್ತದೆ.

ಪ್ರಸ್ತುತ ಭೀಮಾನದಿಯನ್ನು ಮೂಲವಾಗಿಟ್ಟುಕೊಂಡು ವಾಡಿ ಪಟ್ಟಣಕ್ಕೆ ನೀರು ಸರಬರಾಜು ಮಾಡುವ ಯೋಜನೆಯನ್ನು ಪಬ್ಲಿಕ್ ಹೆಲ್ತ್ ಇಂಜಿನಿಯರಿಂಗ್ ಇಲಾಖೆಯಿಂದ 1975ಕ್ಕಿಂತ ಮುಂಚೆ ಚಾಲ್ತಿಗೊಳಿಸಲಾಗಿರುತ್ತದೆ. ಈ ಯೋಜನೆಯ ಪೂರ್ಣ ಪ್ರಮಾಣ ಪ್ರಮುಖ ಕಾಮಗಾರಿಗಳನ್ನು ಶುದ್ಧೀಕರಣ ಘಟಕಗಳನ್ನು ಹೊಂದಿರುವುದಿಲ್ಲ. ಬೇರೆ ಬೇರೆ ಕಾಲದಲ್ಲಿ ನದಿಯಲ್ಲಿ ಲಭ್ಯತೆಯಿಂದ ನೀರಿನ ಆಳವನ್ನು ಪರಿಗಣಿಸಿ ಹಳಿಗಳ ಸಹಾಯದಿಂದ ನದಿಯ ಕಚ್ಚಾ ನೀರನ್ನು ಪಂಪು ಮಾಡಲಾಗುತ್ತದೆ. ಈಗಿನ ಶುದ್ಧೀಕರಣ ಘಟಕವು ಸೆಟ್ಲಿಂಗ್ ಟ್ಯಾಂಕ್‌ನ್ನು ಮಾತ್ರ ಹೊಂದಿದ್ದು ಶುದ್ಧೀಕರಿಸಿದ ನೀರನ್ನು ಪಟ್ಟಣಕ್ಕೆ ತಲಾ ದಿನಂ ಪ್ರತಿ 30:35 ಲೀಟರಿನಂತೆ ಸರಬರಾಜು ಮಾಡಲಾಗುತ್ತಿದ್ದು ಪಟ್ಟಣದ ಶೇಕಡ 50ರಷ್ಟು ಅವಶ್ಯಕತೆಯನ್ನು ಎರಡು ದಿನಗಳಿಗೊಮ್ಮೆ ಪೂರೈಸಲಾಗುತ್ತಿದೆ.

ಪ್ರಸ್ತುತ ನೀರು ಸರಬರಾಜು ಯೋಜನೆಯು ಸಧ್ಯದ ಜನಸಂಖ್ಯೆಯ ಬೇಡಿಕೆಯನ್ನು ಪೂರೈಸಲು ಸಾಕಾಗುವುದಿಲ್ಲ. ಈಗಿನ ಬೇಡಿಕೆಯನ್ನು ಹಾಗೂ ಮುಂಬರುವ ದಿನಗಳ ಬೇಡಿಕೆಯನ್ನು ಪೂರೈಸಲು ಮಧ್ಯಂತರ ಅವಧಿಯಾದ 2021 ಹಾಗೂ 2036ರಲ್ಲಿ ಇರಬಹುದೆಂದು ಅಂದಾಜಿಸಲಾದ ಕ್ರಮವಾಗಿ 53,900 ಮತ್ತು 66,000 ಜನಸಂಖ್ಯೆಗೆ 6.00 MLD ಮತ್ತು ಅಂತಿಮ ಹಂತದಲ್ಲಿ 7.50 MLD ಯಂತೆ ತಲಾ ದಿನಂ ಪ್ರತಿ 100 LPCD ಯನ್ನು ವಾಡಿ ಪಟ್ಟಣ ಹಾಗೂ ಎ.ಸಿ.ಸಿ. ಹೌಸಿಂಗ್ ಕಾಲೋನಿಗೆ ಮತ್ತು 55, LPCD ಯನ್ನು ಕುಂದನೂರು ಗ್ರಾಮಕ್ಕೆ, ನೀರು ಸರಬರಾಜು ಮಾಡುವ ಅಭಿವೃದ್ಧಿ ಕಾಮಗಾರಿಗಳನ್ನು ವಿನ್ಯಾಸಿಸಲಾಗಿದೆ. ಭೀಮನದಿಗೆ ಅಡ್ಡಲಾಗಿ ನಿರ್ಮಿಸುತ್ತಿರುವ ಸನ್ನಾತಿ ಬ್ಯಾರೆಜಿನ ಹಿನ್ನೀರಿನಿಂದ ದಿನಂ ಪ್ರತಿ 7.50 MLD ನೀರನ್ನು ಉಪಯೋಗಿಸಿಕೊಳ್ಳಲು ಉದ್ದೇಶಿಸಲಾಗಿದೆ.

ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿರವರು, 2007–08ನೇ ಸಾಲಿನ ದರಪಟ್ಟಿಯನ್ನು ಆದರಿಸಿ ರೂ. 1250.00 ಲಕ್ಷಗಳ ಅಂದಾಜನ್ನು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

| | |
|---|---|
| ಆರ್ಥಿಕ ಸಂಸ್ಥೆಗಳಿಂದ ಸಾಲ (ಶೇ. 50%) | ರೂ. 605.90 ಲಕ್ಷಗಳು |
| ಸರ್ಕಾರದ ಅನುದಾನ (ಶೇ. 50%) | ರೂ. 605.90 ಲಕ್ಷಗಳು |
| ಕುಂದನೂರು ಗ್ರಾಮಕ್ಕೆ ಸಂಬಂಧಿಸಿದಂತೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪಾಲು | ರೂ. 38.20 ಲಕ್ಷಗಳು |
| **ಒಟ್ಟು** | **ರೂ. 1250.00 ಲಕ್ಷಗಳು** |

2007–08ನೇ ಸಾಲಿನ ಮಂಡಳಿಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ಈ ಯೋಜನೆಗೆ ರೂ. 417.00 ಲಕ್ಷಗಳ ಅನುವು ಮಾಡಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 13 ಯುಡಬ್ಲ್ಯೂಎಸ್ 2007 ಬೆಂಗಳೂರು, ದಿನಾಂಕ: 3ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಚಿತ್ತಾಪುರ ತಾಲೋಕಿನ ವಾಡಿ ಪಟ್ಟಣಕ್ಕೆ ಎ.ಸಿ.ಸಿ. ಕಾಲೋನಿ ಹಾಗೂ ಕುಂದನೂರು ಗ್ರಾಮಕ್ಕೆ ನೀರು ಸರಬರಾಜು ಅಭಿವೃದ್ಧಿಗೊಳಿಸುವ ಯೋಜನೆಯನ್ನು ರೂ. 1250–00 ಲಕ್ಷಗಳಲ್ಲಿ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ನಗರ ನೀರು ಸರಬರಾಜು ಯೋಜನೆಯಡಿ ಕೈಗೆತ್ತಿಕೊಳ್ಳಲು, ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗಳಿಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

1. No furtehr escalation in cost will be allowed.
2. No additionaity will be given by Government.

3. Water rates as proposed by KUWSDB should be borne by ULBs/KUWSDB to meet the O & M cost.
4. The expenditure may be recharged to 2007-08 allocation of Rs. 417.00 lakhs.
5. ಸದರಿ ಯೋಜನೆಯನ್ನು ನಿಗಧಿತ ವೇಳೆಯಲ್ಲಿ ಪೂರ್ಣಗೊಳಿಸುವುದು.
6. ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.
7. ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ FD 767 Exp-9/2007, ದಿನಾಂಕ 11–12–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 65

**ಸಿ.ಟಿ. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಆಕುಕ ಅಧಿಕಾರಿಗಳಿಗೆ ಬಿಎಸ್‌ಎನ್‌ಎಲ್ ಒದಗಿಸಿರುವ ಸಿಮ್ ಕಾರ್ಡ್‌ಗಳ ಬಿಲ್ಲನ್ನು ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂ. ಎಚ್‌ಎಫ್‌ಡಬ್ಲ್ಯೂ/ಕೆಎಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–59/ 207, ಬೆಂಗಳೂರು ದಿನಾಂಕ 18–12–2007.

**ಪ್ರಸ್ತಾವನೆ :**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆ ಅಡಿಯಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖಾ ಅಧಿಕಾರಿಗಳಿಗೆ ಭಾರತ ಸಂಚಾರ ನಿಗಮ ನಿಯಮಿತ ಇವರಿಂದ ಸಯುಜಿ ನೆಟ್‌ವರ್ಕ್ ಅಳವಡಿಸಿ ಮೊಬೈಲ್ ದೂರವಾಣಿಗೆ ಬೇಕಾಗುವ ಸಿಮ್ಮನ್ನು ಒದಗಿಸಿದೆ. ಇದಕ್ಕೆ ತಗಲುವ ಮಾಹೆಯ ವೆಚ್ಚವು ರೂ. 95,650.00.

ಫೆಬ್ರವರಿ ಮಾಹೆಗೆ ತಗುಲಿದ ವೆಚ್ಚ ರೂ. 95,650.00ರ ಬಿಲ್ಲು ಮತ್ತು ಸರ್ಚಾಜು ಈ ಕಚೇರಿಗೆ ಸ್ವೀಕೃತವಾಗಿರುತ್ತದೆ. ಇದನ್ನು ಪಾವತಿಸಬೇಕಾಗಿರುತ್ತದೆ ಹಾಗೂ ಇನ್ನು ಮುಂದೆ ಪ್ರತಿ ತಿಂಗಳಿಗೆ ತಗಲುವ ವೆಚ್ಚವನ್ನು ಪಾವತಿಸುವ ಸಲುವಾಗಿ, ಕೇಂದ್ರ ಸ್ಥಾನವನ್ನು ಹೊರೆತುಪಡಿಸಿ ಇತರೇ ಸ್ಥಳಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಇಲಾಖಾ ಅಧಿಕಾರಿಗಳಿಗೆ, ಪರವಾನಗಿ ನೀಡಬೇಕಾಗಿರುತ್ತದೆ. ಕಾರಣ, ಈ ಕೆಳಗಿನಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಎಚ್‌ಎಫ್‌ಡಬ್ಲ್ಯೂ/ಕೆಎಚ್‌ಎಸ್‌ಡಿಆರ್‌ಪಿ/ಎಸ್‌ಇಸಿಟಿ–59/2007, ಬೆಂಗಳೂರು,**
**ದಿನಾಂಕ: 29ನೇ ಮಾರ್ಚ್ 2008.**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ತಿಳಿಸಿರುವ ಎಲ್ಲಾ ಅಧಿಕಾರಿಗಳು ಉಪಯೋಗಿಸಿರುವ ಸಿಮ್ ಕಾರ್ಡಿನ ಫೆಬ್ರವರಿ ಮಾಹೆಯ ವೆಚ್ಚ ರೂ. 95,650.00 (ನಲವತ್ತೈದು ಸಾವಿರದ ಆರು ನೂರ ಐವತ್ತು ರೂಪಾಯಿ)ಗಳನ್ನು ಮತ್ತು ಇತರೆ ಸರ್ಚಾಜುಗಳನ್ನೊಳಗೊಂಡ ಒಟ್ಟು ಬಿಲ್ಲಿನ ಮೊತ್ತವನ್ನು ಪಾವತಿಸಲು ಮಂಜೂರಾತಿ ನೀಡಿದೆ. ಒಂದು ವೇಳೆ ಆಯಾ ಅಧಿಕಾರಿಗಳಿಗೆ ಮೇಲೆ ತಿಳಿಸಿರುವ ಸರ್ಕಾರಿ ಆದೇಶದಲ್ಲಿ ಅನುಮತಿ ನೀಡಿರುವ ಮೊತ್ತಕ್ಕಿಂತ (post paid amount) ಹೆಚ್ಚಿನ ಮೊತ್ತ ಪಾವತಿಸಬೇಕಾದಲ್ಲಿ ಅದನ್ನು ಆಯಾ ಅಧಿಕಾರಿಗಳಿಂದ ಭರಿಸಿಕೊಳ್ಳಬೇಕು.

ಈ ಮೇಲಿನ ವೆಚ್ಚವನ್ನು ಲೆಕ್ಕಶೀರ್ಷಿಕೆ "2210–06–800–0–81–ಯೋಜನೆ–052 (ದೂರವಾಣಿ ವೆಚ್ಚ)"ರ ಅಡಿಯಲ್ಲಿ ಆಯಾ ಸಾಲಿನಲ್ಲಿ ಭರಿಸತಕ್ಕದ್ದು.

ಕೇಂದ್ರ ಸ್ಥಾನವನ್ನು ಹೊರೆತುಪಡಿಸಿ ಬೇರೆ ಸ್ಥಳಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಇಲಾಖಾ ಅಧಿಕಾರಿಗಳು ತಾವು ಬಳಕೆ ಮಾಡಿರುವ ಸಿಮ್ ಕಾರ್ಡಿಗೆ ತಗಲುವ ವೆಚ್ಚವನ್ನು ತಮ್ಮ ಕಚೇರಿಯಿಂದಲೇ ಸೂಕ್ತ ಲೆಕ್ಕ ಶೀರ್ಷಿಕೆಯಡಿಯಲ್ಲಿ ಆಯಾ ಆರ್ಥಿಕ ವರ್ಷದಲ್ಲಿ ಭರಣ ಮಾಡತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 567

**ಸುಷಮಾ ಗೋಡಬೋಲೆ**
ಸರ್ಕಾರದ ಉಪ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
ಕೆಎಚ್‌ಎಸ್‌ಡಿಆರ್‌ಪಿ

**INFORMATION TECHNOLOGY, BIOTECHNOLOGY AND SCIENCE AND TECHNOLOGY SECRETARIAT**

**Sub :** Approval of the Project proposal of M/s Patel Engineering Ltd., for establishment of Electronic Hardware, Software & Biotechnology Park at Hulimangala, Gollahalli, Trirupalya & Maragondanahalli villages, Anekal Taluk, Bangalore Urban District. Approval for –Orders reg.

**Read :** Proceedings of the 10th State High Level Clearance Committee (SHLCC) meeting held on 28-8-2007.

**Preamble:**

M/s. Patel Engineering Ltd., is a Private Limited Company incorporated under Indian Companies Act, 1956, on 9th December 1999, at Mumbai. The company has business interest in construction of dams, airports, telecom networks, power projects, roads, bridges, micro tunneling & real estate.

The revenue of the company for the year ended 31st March 2006 is Rs. 1002.94 crores & has established the following international subsidiaries as a mcasurc of their International Portfolio, in USA & Mauritius.

- ASI RCC Inc., USA – Thef Company's primary focus is on dam construction.
- Westcon Micro –tunneling Inc., USA – Micro – tunneling contractors in USA.
- Patel Engineering Mauritius Ltd., Mauritius – Undertake Infrastructure projects.
- Waterfront Developers Pvt. Ltd., Mauritius – Real Estate Development Company.

The company and its subsidiaries have executed projects in various countries including USA, China,Greece, Sri Lanka and other countries. A few of the projects undertaken are as follows:

- Platonovrissai dam & Hydroelectric project –Greece
- Stagecoach dam & reservoir –Colorado, USA
- Middle fork dam – Sri Lanka
- Chukha hydro electric project – Bhutan
- General Post office –Doha, Qatar
- IT Park at Hydcrabad
- Mass Housing Development, Mumbai
- Indore Stadium, Surat, Gujarath
- The Hack dam and reservoir – Wyoming, USA
- Token river water supply project – Northeast Africa
- Chukha dam – Bhutan
- Conference centre cum secretariat complex – Bhutan
- Wholesale market centre and mosque – Doha, Qatar
- Corporate Park at Jogeshwari, Mumbai
- Centaur Hotel, Juhu, Mumbai

In the proposal submitted for the 10th State High Level Clearance Committee (SHLCC) meeting held on 28-8-2007, the Company had requested to approve the project to establish "Electronic Hardware, Software & Biotechnology ParK" in 103 acres 17 guntas of land at Hulimangala, Gollahalli, Thirupalya & Maragondanahalli villages, Anekal Taluk, Bangalore Urban District with an investment of Rs. 490 crores.

The project proposes to provide employment to about 32000 persons.

The Principal Secretary, Commerce and Industries has brought to the notice of the Committee that the project is proposed in 103 acres 17 guntas of land. Out of this, 46 acres 26 guntas of land is in the name of one of the Director of the company and for balance land the company has made joint development agreement.

The Commissioner, BDA informed that the project may be established subject to the condition that the green belt should be retained as it is and no construction is permitted in the green belt area.

The promoters informed the committee that company proposes to implement the project as two Sector Specific SEZs for Electronic Hardware/ Software/ IT and ITES SEZs and have created the

following two companies as SPVs to bring in more operational in dependence, expertise and to facilitate funding into the project which are fully owned subsidiaries of M/s. Patel Engineering Ltd.,

1. M/s Hera Realon Pvt. Ltd., 2. M/s. Hebe Infracon Pvt. Ltd.,

Hence, they requested the Committee to allow the Administrative Department to grant the approval in the name of above 2 SPVs subsequently.

The Committee agreed for the request of the company and advised them to submit proposals for the above 2 SEZs in the name of separate SPVs and IT Dept. to consider the same for issual of Government Orders.

Government have examined the recommendations of the SHLCC Hence the following order:

**Government Order No. ITD 32 MDA 2007 (14), Bangalore, Dated 17th March 2008**

In the circumstances explained in the Preamble, Government are pleased to accord approval to M/s. Patel Engineering Ltd., to establish two separate "Sector Specific SEZs through two SPVs created by the subsidiaries of M/s. Patel Engineering Ltd., namely, M/s. Hera Realcon Pvt. Ltd., and M/s. Hebe Infracon Pvt. Ltd., for establishment of Electronic Hardware/ Software / IT and ITEs SEZs, in 25.375 & 25.81 acres respectively for two SEZs and remaining land for non SEZ area in 103 acres 17 guntas of land at Hulimangala, Gollahalli, Thirupalya & Maragondanahalli villages, Anekal Taluk, Bangalore Urban District with the following facilities and incentives.

The infrasctrucutre assistance / incentives & concessions and the conditions of approval are:

**Infrastructure Facilities:**

**LAND:** To accord approval to establish two separate "Sector Specific SEZs' through two SPVs created by the subsidiaries of M/s. Patel Engineering Ltd., namely 1) M/s. Hera Rcalcon Pvt. Ltd., and 2) M/s. Hebe Infracon Pvt. Ltd., for establishment of 'Electronic Hardware/ Software/ IT and ITES SEZs' in 25.375 & 25.81 acres respectively for two SEZs and ramaining land for non SEZ aera in 103 acres 17 guntas of land in Hulimangala, Gollahalli, Thirupalya & Maragondanahalli villages, Anekal Taluk, Bangalore Urban District land and recommend to D.C. Bangalore Urban and conversion of the same.

**Power:** 119 MW power to be serviced by BESCOM.

**Water:** BWSSB to consider to supply 21.65 lakh 1 pd of water after 2011, subject to availability. The company shall adopt rain water harvesting and recycling.

**Incentives & Concessions:** As per SEZ policy of Govt. of India and as per Millennium IT Policy for electronic hardware and software component and as per Millennium Biotechnology Policy for Bio-tech component of the project.

**Environment:** The promoters shall obtain CFE from KSPCB & CRZ Clerance from Government of India and Environmental Clearance from GOI. No. civil works shall commence prior to obtaining ECC.

**Employment:** The company shall prepare a plan for development of human resource required for the project, train local people and provide employment to these trained local youth and comply with Government policy of employment to local people. A copy of human resource development plan shall be sent to the Director of IT & Biotechnology for monitoring.

**Vendor Development :** Where ever there is scope for vendor development for the project, the company shall prepare a vendor development plan, develop local vendors and procure the required inputs, components and sub assemblies from these local vendor units. A copy of the vendor development plan shall be sent to the Director of IT & BT for monitoring.

**Social Infrastructure Development :** The company is advised to take up social infrastructure development projects in the vicinity of proposed location of the unit. A copy of such projects shall be sent to the Director of IT & Biotechnology for monitoring.

**Others:**

The Promoter shall take all statutory and other necessary clearances and shall submit milestones/ progress in implementation of the project regularly, which will be monitored by the Departments concerned.

By order and in the name of the President of India,

PR. 499

**M.V. KRISHNAMURTHY**

Under Secretary to Government,

Information Technology, Biotechnology and Science & Technology Department.

## RURAL DEVELOPMENT AND PANCHAYAT RAJ SECRETARIAT

**Sub :** Implementation of National Rural Employment Guarantee Scheme in all the Districts of the State – Creation of new Directorate of NREGA and the posts therefore etc. – Orders reg.

**Read :**
1. Demi-official Letter No. V-24011/5/2005-SGRY (M) Pt., dated 17-11-2005 from the Secretary to Government of India, Ministry of Rural Development, New Delhi.
2. Demi-official Letter No. 28012/10/2005-NREGA dt 8-10-2007, from the Joint Secretary to Government of India, Ministry of Rural Development, New Delhi.
3. Government Circular No. RDP 35 PaBaWa 08, dt: 6-2-2008.

**Preamble:**

The National Rural Employment Guarantee Act (hereinafter referred to as NREG Act) came to be enacted by Government of India in September 2005 following which the Government of Karnataka has been implementing the Scheme under the said Act in phases since 2-2-2006. The districts covered in the I Phase are Bidar, Gulbarga, Raichur, Davanagere and Chitradurga respectively while those covered under the II Phase with effect from 1-4-2007 are Bellary, Belgaum, Chikmagalur, Hassan, Shimoga and Kodagu. Implementation of the Scheme in Phase-I & Phase-II districts has already gathered momentum.

2. The main objective of the NREG Act is to enhance livelihood security in rural areas by providing 100 days of guaranteed wage employment in a financial year to every household whose adult members volunteer to do unskilled manual work. This work guarantee also serves other objectives such as generating productive assets, protecting the environment, empowering rural women, reducing rural-urban migration and fostering social equity among others etc. The NREG Act also envisages a collaborative partnership between the Central Government, the State Governments, the Panchayat Raj Institutions (PRIs) and the local community.

3. Broadly, the main implementation activities are at the village and Block/Taluk levels, while coordination activities are mainly at the Block/Taluk and District levels, Planning, supervision and monitoring take place at all levels (Village, Block/Taluk, District and State). At each level, the concerned authorities are accountable to the community. The Gram Sabha is the statutorily mandated institutional mechanism for community participation.

4. The overall responsibility for ensuring the implementation of the Scheme as per the NREG Act lies on the State Employment Guarantee Council (SEGC) at the State level, District Programme Coordinator (DPC) at the District level, the Programme Officer (PO) at the Block/ Taluk level and Grama Panchayat at the grass root level. The Gram Panchayat has a pivotal role to play in the implementation of the Scheme. In other words, it is responsible for planning of works, registering households, issuing job cards, allocating employment, executing the works and monitoring the implementation of the Scheme at the village level.

5. The Secretary to Government of India in the Ministry of Rural Development in his letter dated 17-11-2005 read at (1) above, addressed to the Chief Secretary; Govt. of Karnataka had asked the State Government to be fully prepared for the implementation of the Act, which essentially comprised of formulating the Scheme and the rules to facilitate its implementation. In pursuance thereof, the implementation of the Scheme was taken up in Karnataka in two phases as already indicated in paragraph (1) above.

6. In pursuance of the comminication dated 8-10-2007 read at (2) above, received from the Government of India in the Ministry of Rural Development, the ramining 18 districts viz. Bagalkote, Bangalore (U), Bangalore (Rural), Bijapur, Chamarajanagar, Chikkaballapura, Dakshina Kannada, Dharwad, Gadag, Haveri, Kolar, Koppal, Mandya, Mysore, Ramanagar, Tumkur, Udupi and Uttara Kannada have been brought under NREG Act for the purpose of implementing the Employment Guarantee Scheme w.e.f. 1-4-2008. The Information, Education and Communication (IEC) activities in the above districts have already started. The Chief Executive officers of Zilla panchayats, the Executive Officers of Taluk Panchayats and other implementing agencies have been asked to be fully prepared to

launch the Programme as scheduled. The Abdul Nazir Sab State Institute of Rural Development, Mysore is the main Organization entrusted with the responsibility of training the officials and non-officials of PRIs. The National Institute of Rural Development, Hyderabad is also involved to train the personnel.

7. The NREG Act is an important flagship Programme of the Government of India calling for foolproof and transparent implementation with utmost care, caution, total commitment and responsibility by the implementing agencies at all levels i.e., State, Zilla Panchayats, Taluk Panchayats and Gram Panchayats. The Programme is demand based and not a target oriented one. Conducting Social Audit at all the stages of implementation of the scheme is an important activity envisaged in the Act and the responsibility is entrustred to Grama Panchayats.

8. Having regard to the importance of the Scheme, all those involved in its implementation have been properly trained/ are being trained to grow up to the expected level. In all the 5 districts covered under Phase-I, te Social audit is carried out. Frequent inspections by Officers at all levels are being undertaken to ensure effective implementation of the Programme.

9. In the Circular dated 6-2-2008 reat at (3) above, the Deputy Conservators of Forests (Social Forestry) have been appointed as Nodal Officers in every Zilla Panchayat to co-ordinate and monitor effective implementation of the NREG Programme. The said Ciruclar also spells out the functions and responsibilities of these Nodal Officers.

10. Having reagrd to the size of the Programme and the huge amount allocated for its implementation and the fact that such implementation has been made compulsory under the Act, it is felt necessary to have a delivery mechanism, which as to be both adequate and effective. Going by the experience, it is felt necessary to have effective planning, monitoring, supervision and follow-up actions not only at the State level but also at District and Taluk levels. Gram Panchayats are the agencies to execute the projects with active assistance of respective line departments. In other words, considering the unique features of the Act and the key processes involved in its implementation, there is a need to strengthen the delivery mechanism at different levels.

11. As per the guidelines of Government of India communicated in their letter No. 28012/3/05-06 –NREGA dated 30th March 2007, they key functional areas for deployment of additional full time dedicated personnel for the National Rural Employment Guarantee Scheme at Panchayat Raj Institutions are as under:

| Level | Key Functional Areas | Personnel to be deployed |
|---|---|---|
| GP | Registration, Job Card issue, employment demand and provision, work implementation, payment, social audit, records | 1 Gram Rozgar Sewak for each GP |
| Block | Overall Programme management | 1 Programme Officer for each Block |
| | Works | Technical assistants Pooled to service GPs |
| | IT, MIS | Computer Assistants |
| | Finance | Accountant |
| District | Works & durable assets | Works Manager with Technical assistants |
| | IT, MIS | IT Manager with Computer Assistants |
| | Finance | Accounts Manager with Accounts assistants |

12. Keeping all the above aspects in mind, Government has decided to create a separate Directorate with supporting staff for implementation of National Rural Employment Gurantee Act at the State level and also its Unit Offices along with supporting Staff at the Zilla, Taluk and Gram Panchayat levels respectively.

Hence the following order.

**Government Order No. RDP 104 UkhaYo 2007, Bangalore, Dated 2nd April 2008**

In the circumstances explined in the preamble, sanction is accorded to create a separate Directorate with supporting staff for implementation of National Rural Employment Guarantee Act at the State, Zilla, Taluk and Gram Pancahyat levels along with the supporting staff respectively as detailed in the Annexure-I, Annexure-II and Annexure-III to this Order.

Guidelines for out sourcing services will be issued separetely.

The expenditure on the additional staff at Zilla/Taluk/Gram Panchayat level will be met out of 4% of the administrative cost built into the programme.

This order issues with the concurrence of Planning Department vide No. PD 1 DPD 2008, dated 24-1-2008; Finance Department vide No. FD 42 Exp. 6/2008, dated 1-3-2008 and Department of Personnel and Administrative Reforms vide No. DPAR 08/SRA/2007, dated 18-2-2008.

By order and in the name of the President of India,
**A.S. SRIKANTH**
Secretary to Government (Panchayat Raj),
Rural Development and Panchayat Raj Department.

**Annexure-I to the Government Order No. RDP 104 UkhaYo 2007, Bangalore, Dated 2-4-2008**
**NREGS Directorate at State Level:**

| Sl. No. | Designation | No. of Posts | Scale of Pay | Mode of appointment |
|---|---|---|---|---|
| 1 | Director & Ex-Officio Joint Secretary/Additional Secretary to Government of Karnataka | 01 | In the IAS | On deputation of an officer not below the rank of a Selection Grade officer |
| 2 | Joint Directors | 02 | 20025-28275 | On deputation of an officer holding an equivalent grade from Rural Development & Panchayat Raj, Public Works, Agriculture, Watershed, Forest, & other development Departments |
| 3 | Assistant Directors | 04 | 11400-21600 | On deputation of an officer holding an equivalent grade from Rural Development & Panchayat Raj, Public Works, Agriculture, Water shed, Forest & other development Departments. |
| 4 | Assistant Statistical Officer | 01 | 10800-20025 | On deputation from Department of Economics and Statistics |
| 5 | First Division Assistants | 06 | 7275-13750 | On deputation from field departments |
| 6 | Stenographers | 02 | 7275-13750 | On deputation from field departments. |
| 7 | Drivers | 03 | 5800-10500 | Secretariat/ deputation from field departments |
| 8 | Programme Manager (MIS) | 01 | 20000 to 25000 p.m. Consolidated | Out sourcing |

| Sl. No. | Designation | No. of Posts | Scale of Pay | Mode of appointment |
|---|---|---|---|---|
| 9 | Programme Manager (Capacity Building & IEC) | 01 | 20000 to 25000 p.m. Consolidated | Out sourcing |

**A.S. SRIKANTH**

**Annexure-II to the Government Order No. RDP 104 UkhaYo 2007, Bangalore, Dated 2-4-2008**

**Staffing Pattern to strengthen NREGS – At District Level**

| Sl. No. | Designation | No. of Posts | Scale of Pay (In Rs.) | Mode of appointment | Prescribed qualification |
|---|---|---|---|---|---|
| 1 | District Programme Executive | 29 | 20000 p.m. consolidated | Out sourcing | MBA/BE (Civil) with computer knowledge |
| 2 | Data Entry Operator | 29 | 5000 p.m. consolidated | Out sourcing | |

* Depending on the suitability, one of the officers in the Zilla Panchayat, in the Grade and Scale of Pay equivalent to Deputy Secretary of Zilla Panchayat will function as Project Director incharge of National Rural Employment Guarantee Scheme.

**A.S. SRIKANTH**

**Annexure-III to the Government Order No. RDP 104 UkhaYo 2007, Bangalore, Dated 2-4-2008**

**Staffing Pattern to strengthen the NREGS at Taluk Panchayat and Gram Panchayat Level**

| Sl. No. | Designation | No. of Posts | Scale of Pay (In Rs.) | Mode of appointment | Prescribed qualification |
|---|---|---|---|---|---|
| 1 | Additional Programme Officers | 176 | 11400-21600 | On deputation of an officer holding an equivalent grade from Rural Development & Panchayat Raj, Public Works, Agriculture, Watershed, Forest Co-operation & other development Departments | |
| 2 | Computer Assistants | 176 | 5000 per month consolidated | out sourcing | Graduation with computer knowledge |
| 3 | Audit Officers | 176 | 11400-21600 | By upgrading the existing post of Accounts Superintendents* to be filled by State Accounts/ Treasury/ Co-Operative Audit Departments | |
| 4 | Accounts Assistants | 176 | 7275-13750 | On depuatation from State Accounts/ Treasury/ Co-Operative Audit Departments | |

* After upgradation the existing posts of Accoutns Superintendents stands abolished.

**At Grama Panchayat level**

| Sl. No. | Designation | No. of Posts | Scale of Pay (In Rs.) | Mode of appointment | Prescribed qualification |
|---|---|---|---|---|---|
| 1 | Technical Assistants | 3021 | a) 7000 per month consolidated<br>OR<br>b) 5000 per month consolidated | a) Out sourcing<br>OR<br>b) Out sourcing | a) Diploma in Civil Engineering/ Agriculture/ Horticulture with computer knowledge<br>b) Graduation with computer knowledge |

PR. 583

**A.S. SRIKANTH**

**ಸಹಕಾರ ಸಚಿವಾಲಯ**

**ವಿಷಯ :** ದಿ ಬೆಳಗಾವಿ ಪಯನೀರ್ ಅರ್ಬನ್ ಕೋ–ಆಪರೇಟೀವ್ ಬ್ಯಾಂಕ್ ಬೆಳಗಾವಿ ಇದು 2003–04ನೇ ಸಾಲಿಗೆ ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ಲೆಕ್ಕಪರಿಶೋಧನಾ ಶುಲ್ಕ 4,26,950/–ರೂಗಳನ್ನು ಮರುಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:**
1. ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪತ್ರದ ಸಂಖ್ಯೆ: ಎಡಿಎಫ್/13(ಎ)ಪ.ಬ್ಯಾಂ/ಸಿಎ ಸಂ: 2006–07, ದಿನಾಂಕ 2–2–2008.
2. ಪ್ರಧಾನ ವ್ಯವಸ್ಥಾಪಕರು ದಿ ಬೆಳಗಾವಿ ಪಯನೀರ್ ಅರ್ಬನ್ ಕೋ–ಆಪರೇಟೀವ್ ಬ್ಯಾಂಕ್ ಇವರ ಪತ್ರದ ಸಂಖ್ಯೆ: 35/2007–08, ದಿನಾಂಕ 9–2–2008 ಮನವಿ.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಬೆಳಗಾವಿ ಪಯನೀರ್ ಅರ್ಬನ್ ಕೋ–ಆಪರೇಟಿವ್ ಬ್ಯಾಂಕು ತನ್ನ ದುಡಿಯುವ ಬಂಡವಾಳ ಆಧಾರದ ಮೇಲೆ ಲೆಕ್ಕಾಚಾರ ಮಾಡಿ 2003–04ನೇ ಸಾಲಿನ ಲೆಕ್ಕಪರಿಶೋಧನಾ ಶುಲ್ಕವಾಗಿ ರೂ. 6,53,680–00 ಗಳನ್ನು ದಿನಾಂಕ 30–6–2005ರ ಚಲನ್ ಸಂ: 33ರಡಿ ಪಾವತಿ ಮಾಡಿದ್ದು 2003–04ನೇ ಸಾಲಿನ ವಾಸ್ತವ ಲೆಕ್ಕಪರಿಶೋಧನಾ ಶುಲ್ಕವು ಕೇವಲ 101430–00 ರೂಗಳೆಂದೂ 2004–05ನೇ ಸಾಲಿನ ಲೆಕ್ಕಪರಿಶೋಧನ ಶುಲ್ಕವು ರೂ. 1,05,300/–ಗಳೆಂದೂ 2005–06ನೇ ಸಾಲಿನಿಂದ ಸದರಿ ಬ್ಯಾಂಕಿನ ಲೆಕ್ಕಪರಿಶೋಧನೆಯನ್ನು ಚಾರ್ಟರ್ಡ್ ಅಕೌಂಟೆಂಟರಿಗೆ ವಹಿಸಿರುವುದರಿಂದ 2005–06 ಮತ್ತು 2006–07ನೇ ಸಾಲಿನ ಸೇವಾ ಶುಲ್ಕ ರೂ. 20,000–00 ಗಳಿದ್ದು (6,53,680–2,06,730–20,000=4,26,950/–) ರೂ. 4,26,950–00ನ್ನು ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುತ್ತದೆ ಎಂದು ತಿಳಿಸುತ್ತಾ 2005–06ನೇ ಸಾಲಿನಿಂದ ಈ ಬ್ಯಾಂಕಿನ ಲೆಕ್ಕಪರಿಶೋಧನೆಯನ್ನು ಚಾರ್ಟರ್ಡ್ ಅಕೌಂಟೆಂಟರ ಮೂಲಕ ಮಾಡಿಸುತ್ತಿರುವುದರಿಂದ ಹೆಚ್ಚಾಗಿ ಪಾವತಿಸಲ್ಪಟ್ಟ ಲೆಕ್ಕಪರಿಶೋಧನಾ ಶುಲ್ಕವನ್ನು ಮುಂದಿನ ಸಾಲಿನಲ್ಲಿ ಹೊಂದಾಣಿಕೆ ಮಾಡಿಕೊಳ್ಳುವ ಸಾಧ್ಯತೆ ಇರುವುದಿಲ್ಲವೆಂದೂ ವರದಿ ಮಾಡುತ್ತಾ ರೂ. 4,26,950–00 ರೂಗಳನ್ನು ಸದರಿ ಬ್ಯಾಂಕಿಗೆ ವಾಪಸ್ಸು ಕೊಡಲು ಮಂಜೂರಾತಿ ನೀಡಬೇಕೆಂದು ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 23 ಸಿಎಲ್ಎಂ 2008, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2008.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಿ ಬೆಳಗಾವಿ ಪಯನೀರ್ ಅರ್ಬನ್ ಕೋ–ಆಪರೇಟೀವ್ ಬ್ಯಾಂಕು 2003–04ನೇ ಸಾಲಿಗೆ ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ಲೆಕ್ಕಪರಿಶೋಧನಾ ಶುಲ್ಕ ರೂ. 4,26,950/– (ನಾಲ್ಕು ಲಕ್ಷದ ಇಪ್ಪತ್ತಾರು ಸಾವಿರದ ಒಂಬೈನ್ನೂರ ಐವತ್ತು ರೂಗಳು ಮಾತ್ರ) ಗಳನ್ನು ಸದರಿ ಬ್ಯಾಂಕಿಗೆ ಮರುಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2007–08ನೇ ಸಾಲಿನಲ್ಲಿ ಒದಗಿಸಿರುವ ಲೆಕ್ಕಶೀರ್ಷಿಕೆ "0425–00–900–0–00 ವಜಾ ವಾಪಸಾತಿ" ಅಡಿಯಲ್ಲಿ ಭರಿಸತಕ್ಕದ್ದು.

ಈ ಮೊತ್ತವನ್ನು ಸಹಕಾರ ಲೆಕ್ಕ ಪರಿಶೋಧನಾ ಜಂಟಿ ನಿಬಂಧಕರು (ಆಡಿಟ್–2) ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ ಬೆಂಗಳೂರು ಇವರು ಹಣ ಸಂದಾಯ ರಸೀತಿಯ ಮೂಲಕ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರು ಬೆಂಗಳೂರು ಇವರ ಮೇಲು ಸಹಿ ಪಡೆದು ಖಜಾನೆಯಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶದ ಸಂಖ್ಯೆ: ಎಫ್‌ಡಿ–1/ಟಿಎಫ್‌ಪಿ/2006, ದಿನಾಂಕ 2–9–2006ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 543

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಲೋಕಾಯುಕ್ತ ಸಂಸ್ಥೆಯ ಉಪಯೋಗಕ್ಕಾಗಿ ಹೊಸ ವಾಹನಗಳ ಖರೀದಿ ಬಗ್ಗೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 31 ಸೇಲೋಯು 2008 ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2008.**

**ಓದಲಾಗಿದೆ:** ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಹೊಸ ವಾಹನ ಖರೀದಿ–2/07–08, ದಿನಾಂಕ 16–2–2008.

**ಪ್ರಸ್ತಾವನೆ :**

ಲೋಕಾಯುಕ್ತ ಸಂಸ್ಥೆಯಲ್ಲಿರುವ ಹಳೆಯ 4 ಅನುಪಯುಕ್ತ ವಾಹನಗಳನ್ನು ಹೈಡ್ರಾಲಜಿ ಮತ್ತು ಯಾಂತ್ರಿಕ ಸಂಸ್ಥೆಯ ವಶಕ್ಕೆ ನೀಡಲು ನಿರ್ಧರಿಸಲಾಗಿದೆ. ಲೋಕಾಯುಕ್ತ ಸಂಸ್ಥೆಯ ಪ್ರಧಾನ ಕಛೇರಿ ಹಾಗೂ ಜಿಲ್ಲಾವಾರು ಅಧಿಕಾರಿಗಳ ಕೆಲಸವು ಹೆಚ್ಚಾಗಿರುವುದಾಗಿ ಹಾಗೂ ತನಿಖೆ ಮತ್ತು ಇನ್ನಿತರ ಕಛೇರಿ ಕೆಲಸಗಳ ನಿರ್ವಹಣೆಗೆ ಹೊಸ ವಾಹನಗಳ ಅಗತ್ಯತೆ ಇರುವುದಾಗಿ ಕರ್ನಾಟಕ ಲೋಕಾಯುಕ್ತದ ನಿಬಂಧಕರು ಮೇಲೆ ಓದಲಾದ ದಿನಾಂಕ 16–2–2008ರ ಪತ್ರದಲ್ಲಿ ತಿಳಿಸಿರುತ್ತಾರೆ ಹಾಗೂ ಡಿಜಿಎಸ್ & ಡಿ ದರಗಳಲ್ಲಿ ಮಹೇಂದ್ರ ಬುಲೆರೋನ 3 ವಾಹನಗಳನ್ನು ಹಾಗೂ ಮಾರುತಿ ಆಮ್ನಿ 8 ಸೀಟರ್ (ಯುರೋ–3)ನ ಒಂದು ವಾಹನವನ್ನು ಒಟ್ಟು ರೂ. 16.17 ಲಕ್ಷ ವೆಚ್ಚದಲ್ಲಿ ಇದೇ ಸಾಲಿನಲ್ಲಿ ಪ್ರಸ್ತುತ ಉಳಿದಿರುವ ಅನುದಾನದಲ್ಲಿ ಖರೀದಿಸಲು ಅನುಮತಿಯನ್ನು ಕೋರಿರುವರು.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ:

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಲೋಕಾಯುಕ್ತ ಕಛೇರಿಯ 2 ಅನುಪಯುಕ್ತ ಹಳೆಯ ವಾಹನಗಳನ್ನು ನಿಯಮಾನುಸಾರ ವಿಲೇಗೊಳಿಸುವ ಷರತ್ತಿಗೆ ಒಳಪಟ್ಟು, ಪ್ರಸಕ್ತ ಸಾಲಿನಲ್ಲಿ ಲಭ್ಯವಿರುವ ರೂ. 10.78 ಲಕ್ಷ (ಹತ್ತು ಲಕ್ಷ ಎಪ್ಪತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ಅನುದಾನದ ಮಿತಿಯಲ್ಲಿಯೇ ಎರಡು ಹೊಸ ವಾಹನಗಳನ್ನು ಡಿಜಿಎಸ್ & ಡಿ ದರಗಳಲ್ಲಿ ಖರೀದಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ "2070–00–104–0–03–ಡಿಜಿಬಿಓಬಿ–195–ಸಾರಿಗೆ ವೆಚ್ಚ"ದಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 480 ವೆಚ್ಚ–5/2008 ದಿನಾಂಕ 29–3–2008ರ ಸಹಮತಿಯೊಂದಿಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 546

**ಪಿ. ಮಾರ್ಕಂಡೇಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು–2)

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ :** ಶ್ರೀ ಎಂ. ಬಸವಣ್ಣ, ನಿವೃತ್ತ ಹಿರಿಯ ವಾಹನ ಚಾಲಕರು, ಬಾಲಭವನ ಸೊಸೈಟಿ, ಬೆಂಗಳೂರು, ಇವರನ್ನು ದೋಷಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:**

1. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಪತ್ರ ಸಂಖ್ಯೆ: ನಿಸಿಶಿಅ:10: 04–05, ದಿ: 10–9–2004.
2. ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಮಮಇ 680 ಎಸ್‌ಜೆಡಿ 2004, ದಿನಾಂಕ: 12–1–2005.
3. ಶ್ರೀ ಎಂ. ಬಸವಣ್ಣ, ನಿವೃತ್ತ ವಾಹನ ಚಾಲಕರು, ಇವರ ಲಿಖಿತ ಹೇಳಿಕೆ ಪತ್ರ ದಿ: 15–2–2005.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು, ಇವರು ಬಾಲಭವನ ಸೊಸೈಟಿಯಲ್ಲಿ ಹಿರಿಯ ವಾಹನ ಚಾಲಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎಂ. ಬಸವಣ್ಣ ಇವರು ದಿ: 8–11–2002ರಿಂದ 13–11–2002 ರವರೆಗೆ ಕೈವಾರದ ಯೋಗಿ ನಾರಾಯಣಾಶ್ರಮದಲ್ಲಿ ಬಾಲಭವನದ ವತಿಯಿಂದ ಆಯೋಜಿಸಲಾಗಿದ್ದ ರಾಜ್ಯ ಮಟ್ಟದ ಚಿಣ್ಣರ ಕಲಾ ಪುನಶ್ಚೇತನ ಶಿಬಿರ ಹಾಗೂ ಚಿಣ್ಣರ ಕಲಾಶ್ರೀ ಪ್ರಶಸ್ತಿ ಶಿಬಿರಕ್ಕೆ ಬಾಲಭವನದಿಂದ ಮಕ್ಕಳನ್ನು ಸೊಸೈಟಿಯ ಬಸ್ಸು ಸಂಖ್ಯೆ: ಕೆಎ 01 ಜಿ 8260 ರಲ್ಲಿ ಕರೆದುಕೊಂಡು ಹೋಗಿ ಶಿಬಿರದ ಸ್ಥಳದಲ್ಲಿ ಬಿಟ್ಟು ವಾಪಸ್ಸು ಬರುವಾಗ ಅಜಾಗರೂಕತೆಯಿಂದ ಚಾಲನೆ ಮಾಡಿ ಹೊಸಕೋಟೆ ಸಮೀಪ ಬೆಂಗಳೂರು ಮತ್ತು ಕೈವಾರದ ರಸ್ತೆಯಲ್ಲಿ ನಿಂತಿದ್ದ ಮರಳು ತುಂಬಿದ ಲಾರಿ ಸಂಖ್ಯೆ: ಸಿಎಎ 5335ಗೆ ದಿ: 8–11–2002ರಂದು ರಾತ್ರಿ ಸುಮಾರು 10.30ರ ಸಮಯದಲ್ಲಿ ಲಾರಿಯ ಹಿಂಬದಿಗೆ ಡಿಕ್ಕಿ ಹೊಡೆಸಿ ಅಪಘಾತಕ್ಕೆ ಈಡು ಮಾಡಿದ್ದು, ಈ ಸಂಬಂಧ ನೌಕರರ ವಿರುದ್ಧ ಸರ್ಕಾರದಿಂದ ಇಲಾಖಾ ವಿಚಾರಣೆಯನ್ನು ನಡೆಸಲು ಕ್ರಮ ತೆಗೆದುಕೊಳ್ಳುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ಆಪಾದಿತ ನೌಕರರಿಗೆ ಆರೋಪ ಪಟ್ಟಿಯನ್ನು ಜಾರಿಗೊಳಿಸಿದ್ದು, ಆಪಾದಿತ ನೌಕರರು ಮೇಲೆ ಓದಲಾದ ಕ್ರಮ ಸಂಖ್ಯೆ (3)ರಲ್ಲಿ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಈ ಅಪಘಾತ ಸಂಭವಿಸಿ ಸುಮಾರು 5 ವರ್ಷಗಳು ಕಳೆದಿದ್ದು, ಅಪಘಾತಕ್ಕೊಳಗಾದ ವಾಹನವನ್ನು ಈಗಾಗಲೇ ದುರಸ್ತಿ ಪಡಿಸಲಾಗಿದ್ದು ಈ ಅಪಘಾತಕ್ಕೆ ಸಂಬಂಧಿಸಿದಂತೆ ಬಾಲಭವನ ಸೊಸೈಟಿಯಿಂದ ವಾಹನಕ್ಕೆ ಮಾಡಿಸಿರುವ ವಿಮೆಯಿಂದ ರೂ. 71.036 ಗಳನ್ನು ಕರ್ನಾಟಕ ರಾಜ್ಯ ವಿಮಾ ಇಲಾಖೆಯು ಪಾವತಿ ಮಾಡಿರುತ್ತದೆ. ಅಲ್ಲದೆ ನೌಕರರು ದಿ: 30–6–2003ರಂದು ವಯೋನಿವೃತ್ತಿ

ಹೊಂದಿದ್ದು, ಇವರಿಗೆ ದೊರೆಯಬೇಕಾದ ನಿವೃತ್ತಿ ಸೌಲಭ್ಯಗಳನ್ನು ಮಂಜೂರು ಮಾಡಿರುವುದಿಲ್ಲ. ಈ ಪ್ರಕರಣದ ಬಗ್ಗೆ ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 680 ಎಸ್‌ಜೆಡಿ 2004, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಂ. ಬಸವಣ್ಣ, ನಿವೃತ್ತ ಹಿರಿಯ ವಾಹನ ಚಾಲಕರು, ಬಾಲಭವನ ಸೊಸೈಟಿ, ಬೆಂಗಳೂರು, ಇವರನ್ನು ಈ ಪ್ರಕರಣದಿಂದ ಆರೋಪ ಮುಕ್ತಗೊಳಿಸಲಾಗಿದೆ ಹಾಗೂ ಶ್ರೀ ಎಂ. ಬಸವಣ್ಣ, ಇವರು ನಿವೃತ್ತಿ ಹೊಂದಿದ ದಿನಾಂಕದಿಂದ ಜಾರಿಗೆ ಬರುವಂತೆ ದೊರೆಯಬೇಕಾದ ನಿವೃತ್ತಿ ಸೌಲಭ್ಯಗಳನ್ನು ಮಂಜೂರು ಮಾಡಿ ಆದೇಶಿಸಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 398

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ವಿಷಯ :** ಶ್ರೀಮತಿ ಸುನಂದಮ್ಮ ಬಸನಗೌಡ ಅಯ್ಯನ ಗೌಡ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಜಗಳೂರು, ದಾವಣಗೆರೆ ಜಿಲ್ಲೆ ಇವರನ್ನು ಲೋಕಾಯುಕ್ತರ ಟ್ರ್ಯಾಪ್ ಪ್ರಕರಣದಲ್ಲಿ ಅಮಾನತ್ತಿನಲ್ಲಿಡುವ ಕುರಿತು.

**ಓದಲಾಗಿದೆ:** ಅಪರ ಪೊಲೀಸ್ ಮಹಾನಿರ್ದೇಶಕರು, ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ ಲೋಕ್/ಐಎನ್‌ವಿ(ಜಿ)/ಸಿಟಿಎಲ್–31/ಸಿ.ಆರ್.–9/2007, ದಾವಣಗೆರೆ ದಿ: 31–12–2007.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 31–12–2007ರ ಪತ್ರದಲ್ಲಿ ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಶ್ರೀಮತಿ ಸುನಂದಮ್ಮ ಬಸನಗೌಡ ಅಯ್ಯನಗೌಡ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಜಗಳೂರು, ದಾವಣಗೆರೆ ಜಿಲ್ಲೆ ಇವರು ಫಿರ್ಯಾದುದಾರರಾದ ಶ್ರೀ ಸಿ.ಆರ್. ಮಂಜುನಾಥ್, ಬಿನ್ ರೇವಣಪ್ಪ, ಬೆಸ್ತೂರು ಟ್ರಾನ್ಸಪೋರ್ಟರ್, ಪಾಪಿದೇವರಗುಡಿ ಹತ್ತಿರ, ಜಗಳೂರು ಇವರು ದಾವಣಗೆರೆ ಲೋಕಾಯುಕ್ತ ಠಾಣೆಗೆ ಹಾಜರಾಗಿ 2006–07 ಮತ್ತು 2007–08ನೇ ಜಗಳೂರು ತಾಲ್ಲೂಕಿನ ಅಂಗನವಾಡಿ ಕೇಂದ್ರಗಳಿಗೆ ಆಹಾರ ಸಾಮಗ್ರಿಗಳನ್ನು ಸಾಗಾಣಿಕೆ ಮಾಡಲು ಕಾರ್ಯ ನಿರ್ವಾಹಕ ಅಧಿಕಾರಿಗಳು ತಾಲ್ಲೂಕು ಪಂಚಾಯತಿ, ಜಗಳೂರು ರವರಿಂದ ಟೆಂಡರ್ ಮೂಲಕ ಗುತ್ತಿಗೆ ಮಂಜೂರಾತಿ ಪಡೆದು 2007ರ ಮಾರ್ಚಿ, ಮೇ, ಜೂನ್, ಆಗಸ್ಟ್, ಸೆಪ್ಟೆಂಬರ್, ಅಕ್ಟೋಬರ್ ಮತ್ತು ಡಿಸೆಂಬರ್ ತಿಂಗಳುಗಳಲ್ಲಿ ಜಗಳೂರು ತಾಲ್ಲೂಕಿನ ಅಂಗನವಾಡಿ ಕೇಂದ್ರಗಳಿಗೆ ಆಹಾರ ಸಾಮಗ್ರಿಗಳನ್ನು ಸಾಗಾಣಿಕೆ ಮಾಡಿದ್ದು, ಈ ಸಂಬಂಧ ಒಟ್ಟು ರೂ. 1,23,273/–ಗಳ ಏಳು ಕ್ರೆಡಿಟ್ ಬಿಲ್ಲುಗಳನ್ನು ದಿ: 19–12–2007ರಂದು ಜಗಳೂರು ಸಿ.ಡಿ.ಪಿ.ಓ., ಕಚೇರಿಗೆ ಸಲ್ಲಿಸಲಾಗಿ, ಶ್ರೀಮತಿ ಸುನಂದಮ್ಮ, ಸಿ.ಡಿ.ಪಿ.ಓ., ಜಗಳೂರು ರವರು ಸದರಿ ಬಿಲ್ಲುಗಳನ್ನು ಮಂಜೂರು ಮಾಡಿ, ಚೆಕ್ ನೀಡಲು ರೂ. 3000/– ಲಂಚದ ಹಣವನ್ನು ಸ್ವೀಕರಿಸಿ, ಇನ್ನೂ ರೂ. 5000/– ಲಂಚವನ್ನು ತಂದುಕೊಟ್ಟರೆ ಮಾತ್ರ ಸದರಿ ಕ್ರೆಡಿಟ್ ಬಿಲ್ಲುಗಳನ್ನು ಮಂಜೂರು ಮಾಡಿ, ಚೆಕ್ ನೀಡುವುದಾಗಿ ಲಂಚಕ್ಕೆ ಒತ್ತಾಯಿಸಿದ್ದು, ಫಿರ್ಯಾದುದಾರರಾದ ಶ್ರೀ ಸಿ.ಆರ್. ಮಂಜುನಾಥ್‌ರವರು ಲಂಚದ ಹಣ ಕೊಡಲು ಇಷ್ಟವಿಲ್ಲದ ಕಾರಣ ಕಾನೂನು ಕ್ರಮ ತೆಗೆದುಕೊಳ್ಳುವಂತೆ ಕೋರಿರುತ್ತಾರೆಂದು, ಸದರಿ ದೂರನ್ನು ಆಧರಿಸಿ ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂ: 9/2007ರಲ್ಲಿ ಪ್ರಕರಣವನ್ನು ದಾಖಲಿಸಿಕೊಂಡು ತನಿಖೆಯನ್ನು ಕೈಗೊಂಡಿರುವುದಾಗಿ ವರದಿ ಮಾಡಿರುತ್ತಾರೆ.

ಶ್ರೀಮತಿ ಸುನಂದಮ್ಮ, ಬಸನಗೌಡ ಅಯ್ಯನ ಗೌಡ ಇವರ ವಿರುದ್ಧ ಭ್ರಷ್ಟಾಚಾರದ ಆಪಾದನೆ ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಶ್ರೀಯುತರನ್ನು ಕೂಡಲೇ ಅಮಾನತ್ತಿನಲ್ಲಿ ಇರಿಸಲು ಲೋಕಾಯುಕ್ತರವರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಲೋಕಾಯುಕ್ತರ ಶಿಫಾರಸ್ಸನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 28 ಎಸ್‌ಜೆಡಿ 2008 ಬೆಂಗಳೂರು, ದಿನಾಂಕ: 25ನೇ ಜನವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀಮತಿ ಬಸನಗೌಡ ಅಯ್ಯನಗೌಡ, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಮಹಿಳಾ ಮತ್ತು ಮಕ್ಕಲ ಅಭಿವೃದ್ಧಿ ಇಲಾಖೆ, ಜಗಳೂರು, ದಾವಣಗೆರೆ ಜಿಲ್ಲೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 10(1)(ಎ) ಮೇರೆಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 98(1)ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಭಾರತ ರಾಷ್ಟ್ರಾಧ್ಯಕ್ಷರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 193

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ವಶದಲ್ಲಿರುವ ಗುಪ್ತನಿಧಿಯ ಭದ್ರತಾ ಕೊಠಡಿಯನ್ನು ತೆರೆದು ಇನ್‌ವೆಂಟ್ರಿ ತಯಾರಿಸಲು ಅಧಿಕಾರಿಗಳ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಸನಿ/7/2007–08, ದಿನಾಂಕ 12–6–2006 ಮತ್ತು 30–6–2007.
2. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಅಪ್ರಾಸಂಪ:ಟಿಆರ್‌ಟಿ: 2006–07 ದಿನಾಂಕ 16–6–2006 ಮತ್ತು 19–1–2007.

**ಪ್ರಸ್ತಾವನೆ :**

ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರು ಮೇಲೆ (1)ರಲ್ಲಿ ಓದಲಾದ ಪತ್ರಗಳಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ವಶದಲ್ಲಿರುವ ಪ್ರಾಚೀನ ನಾಣ್ಯಗಳು ಮತ್ತು ಇನ್ನಿತರ ಗುಪ್ತನಿಧಿಯ ಸಂಗ್ರಹವನ್ನು ಶೇಖರಿಸಿಟ್ಟಿರುವ ಭದ್ರತಾ ಕೊಠಡಿಯನ್ನು ತೆರೆದು ವಿವರವಾದ ಇನ್‌ವೆಂಟ್ರಿಯನ್ನು ತಯಾರಿಸುವ ಸಲುವಾಗಿ ಪಂಚನಾಮೆಯೊಂದನ್ನು ಕೈಗೊಂಡು ಅಲ್ಲಿರುವ ಎಲ್ಲಾ ಪದಾರ್ಥಗಳನ್ನು ಲಭ್ಯವಿರುವ ವಹಿಗಳಿಗೆ ಅನುಗುಣವಾಗಿ ದಾಖಲಿಸಲು ಅಧಿಕಾರಿಗಳ ಸಮಿತಿಯೊಂದನ್ನು ರಚಿಸುವಂತೆ ಕೋರಿದ್ದಾರೆ.

ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ಪತ್ರಗಳಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ವಶದಲ್ಲಿರುವ ಗುಪ್ತನಿಧಿಯ ಭದ್ರತಾ ಕೊಠಡಿಯನ್ನು ಉಪವಿಭಾಗ ದಂಡಾಧಿಕಾರಿ ಹುದ್ದೆಗೆ ಕಡಿಮೆ ಇಲ್ಲದ ಕಾರ್ಯನಿರ್ವಾಹಕ ದಂಡಾಧಿಕಾರಿಯವರ ಸಮಕ್ಷಮದಲ್ಲಿ ನಿಯಮಾನುಸಾರ ಪಂಚನಾಮೆ ಮಾಡಿ ಪರಿಶೀಲನೆ ಮಾಡಲು ನಿರ್ದೇಶಕರಿಗೆ ಅನುಮತಿ ನೀಡಬಹುದೆಂದು ತಿಳಿಸಿರುತ್ತಾರೆ. ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 127 ಕೆಎಂಯು 2006, ಬೆಂಗಳೂರು, ದಿನಾಂಕ: 23ನೇ ಫೆಬ್ರವರಿ 2008.**

ಜಿಲ್ಲಾಧಿಕಾರಿಗಳು, ಮೈಸೂರು ಜಿಲ್ಲೆ ಅವರ ಸಮಕ್ಷಮದಲ್ಲಿ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯ ವಶದಲ್ಲಿರುವ ಗುಪ್ತನಿಧಿ ಭದ್ರತಾ ಕೊಠಡಿಯನ್ನು ತೆರೆದು ಪರಿಶೀಲನೆ ಮತ್ತು ಗಣಕೀಕರಣವನ್ನು ಮಾಡಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1) | ಶ್ರೀ ವಿ.ಎ. ಮಾಚಕನೂರ, ಕೆ.ಎ.ಎಸ್. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು | ಅಧ್ಯಕ್ಷರು |
| 2) | ಡಾ: ಆರ್. ಗೋಪಾಲ್, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು | ಸದಸ್ಯರು |
| 3) | ಶ್ರೀ ಎಚ್.ಟಿ. ತಳವಾರ್, ಉಪನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು | ಸದಸ್ಯರು |
| 4) | ಶ್ರೀ ಸೂರ್ಯನಾರಾಯಣ, ನಿವೃತ್ತ ಪತ್ರಾಂಕಿತ ಸಹಾಯಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ | ಸದಸ್ಯರು |
| 5) | ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಮೈಸೂರು | ಸದಸ್ಯರು |
| 6) | ಶ್ರೀ ಟಿ.ಎಸ್. ಗಂಗಾಧರ್, ಸಹಾಯಕ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು | ಸದಸ್ಯ ಕಾರ್ಯದರ್ಶಿ |

ಜಿಲ್ಲಾಧಿಕಾರಿಗಳು, ಮೈಸೂರು ಅವರ ಸಮಕ್ಷಮದಲ್ಲಿ ಗುಪ್ತನಿಧಿ ಭದ್ರತಾ ಕೊಠಡಿಯನ್ನು ತೆರೆದು ಪರಿಶೀಲನೆ ಮತ್ತು ಗಣಕೀಕರಣ ಮಾಡಲು ಸಮಿತಿಯ ಕ್ರಮ ಕೈಗೊಳ್ಳಬೇಕೆಂದು ಆದೇಶಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 375

**ಪೆಮ್ಮಂಡ ಎಸ್. ರಾಣಿ**

ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಜಲ ಸಂಪನ್ಮೂಲ ಸಚಿವಾಲಯ**

**ವಿಷಯ :** ರಾಜ್ಯದ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳಲ್ಲಿ ನೇಮಕಾತಿ ಹೊಂದಿದ ನೌಕರರುಗಳಿಗೆ ಕಾಲಮಿತಿ/ ಸ್ವಯಂಚಾಲಿತ/ ಹೆಚ್ಚುವರಿ ವೇತನ ಬಡ್ತಿ ಸೌಲಭ್ಯಗಳನ್ನು ಕಲ್ಪಿಸುವ ಬಗ್ಗೆ – ಆದೇಶ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಐಡಿ 28 ಸಿಎಎಂ 93, ದಿನಾಂಕ 12–3–1996.
2. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 88 ಎಸ್‌ಆರ್‌ಪಿ (ಸಿಎಸ್‌ಸಿ) 81, ದಿನಾಂಕ 27–3–1982.
3. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 1991, ದಿನಾಂಕ 29–10–1991.
4. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 13 ಎಸ್‌ಆರ್‌ಪಿ 2002, ದಿನಾಂಕ 9–5–2002.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಯಲ್ಲಿ ರಾಜ್ಯದ ಕಾಡಾ ಪ್ರಾಧಿಕಾರಿಗಳಿಗೆ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರಿಂದ (4)ರ ಸರ್ಕಾರದ ಆದೇಶಗಳಲ್ಲಿ ಬಡ್ತಿ ಹೊಂದದೇ ಒಂದೆ ಹುದ್ದೆಯಲ್ಲಿ 10, 15 ಮತ್ತು 20 ವರ್ಷಗಳವರೆಗೆ ಸೇವೆ ಸಲ್ಲಿಸಿರುವ ಸರ್ಕಾರಿ ನೌಕರರಿಗೆ ಕಾಲಮಿತಿ ವೇತನ ಬಡ್ತಿ, ಸ್ವಯಂಚಾಲಿತ ವೇತನ ಬಡ್ತಿ ಹಾಗೂ ಹೆಚ್ಚುವರಿ ವೇತನ ಬಡ್ತಿಗಳನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಕಾಡಾ ನಿಯಮ 1980ರ ನಿಯಮ 5(2)ರ ಮತ್ತು ಕಾಡಾ ವೃಂದ ನೇಮಕಾತಿ ನಿಯಮ 1987ರ ನಿಯಮ 25ರಲ್ಲಿ ಕೆ.ಸಿ.ಎಸ್.ಆರ್.ನ ಕೆಲವೊಂದು ನಿಯಮಗಳು ಕಾಡಾ ಪ್ರಾಧಿಕಾರದ ನೌಕರರಿಗೂ ಯಥಾವತ್ತಾಗಿ ಅನ್ವಯವಾಗುವುದಾದರೂ ಸಹ ಮೇಲೆ ಓದಲಾದ (2)ರಿಂದ (4)ರ ವರೆಗಿನ ಆದೇಶದ ನಿಯಮಗಳು ಕೆ.ಸಿ.ಎಸ್.ಆರ್. ನಿಯಮದ ಭಾಗವಾಗಿರದೇ ಪ್ರತ್ಯೇಕ ನಿಯಮಗಳಾಗಿರುವುದರಿಂದ, ರಾಜ್ಯದ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ನೌಕರರಿಗೆ ಸದರಿ ನಿಯಮಗಳಲ್ಲಿನ ಸೌಲಭ್ಯಗಳನ್ನು ಯಥಾವತ್ತಾಗಿ ನೀಡಲು ಸರ್ಕಾರದಿಂದ ಪ್ರತ್ಯೇಕ ಮಂಜೂರಾತಿ ಅಗತ್ಯವಿರುತ್ತದೆ. ಕಾಡಾ ಪ್ರಾಧಿಕಾರದ ನೌಕರರಿಗೂ ಸಹ ಮೇಲಿನ (2) ರಿಂದ (4)ರಲ್ಲಿನ ಸರ್ಕಾರಿ ಆದೇಶದಲ್ಲಿ ಕಲ್ಪಿಸಲಾಗಿರುವ ಸೌಲಭ್ಯಗಳನ್ನು ವಿಸ್ತರಿಸುವಂತೆ ಎಲ್ಲಾ ಪ್ರಾಧಿಕಾರಗಳಿಂದ ಪ್ರಸ್ತಾವನೆಗಳು ಬಂದಿದ್ದು, ಅವುಗಳನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 22 ಸಿಎಂಜಿ 2002, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ರಾಜ್ಯದ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳಲ್ಲಿ ಕ್ರಮಬದ್ಧವಾಗಿ ನೇಮಕಾತಿ ಮಾಡಿ, ನಿಯಮಾನುಸಾರ ಸೇವಾ ಸಕ್ರಮಗೊಂಡು ಒಂದೇ ಹುದ್ದೆಯಲ್ಲಿ 10, 15 ಮತ್ತು 20 ವರ್ಷಗಳವರೆಗೆ ಬಡ್ತಿ ಇಲ್ಲದೆ ಕಾರ್ಯನಿರ್ವಹಿಸುತ್ತಿರುವ ಪ್ರಾಧಿಕಾರದ ಸಿಬ್ಬಂದಿಗಳಿಗೆ ಕಾಲಮಿತಿ ವೇತನ ಬಡ್ತಿ, ಸ್ವಯಂಚಾಲಿತ ವೇತನ ಬಡ್ತಿ ಹಾಗೂ ಹೆಚ್ಚುವರಿ ವೇತನ ಬಡ್ತಿ ನಿಯಮಗಳನ್ನು ಪ್ರಾಧಿಕಾರದ ನೌಕರರಿಗೂ ಯಥಾವತ್ತಾಗಿ ಅನ್ವಯಿಸಲು ಮಂಜೂರಾತಿ ನೀಡಿದೆ. ಈ ಹೆಚ್ಚುವರಿ ಬಡ್ತಿಗಳಿಗೆ ಪ್ರಸ್ತಾವನೆಯನ್ನು ಸರ್ಕಾರವು ಹೊರಡಿಸಿರುವ ಈ ಮುಂದೆ ಕಾಣಿಸಿರುವ ಆದೇಶಗಳು ಹಾಗೂ ಅವುಗಳ ಮೇಲೆ ಕಾಲಕಾಲಕ್ಕೆ ಹೊರಡಿಸಿರುವ / ಹೊರಡಿಸಬಹುದಾದ ಆದೇಶ / ಸುತ್ತೋಲೆ ಮತ್ತು ಮಾರ್ಗಸೂಚಿಗಳ ಚೌಕಟ್ಟಿನೊಳಗೆ ಪರಿಶೀಲಿಸಿ, ಅರ್ಹ ಪ್ರಕರಣಗಳಲ್ಲಿ ಮಾತ್ರ ಸಂಬಂಧಪಟ್ಟ ಪ್ರಾಧಿಕಾರದ ಆಡಳಿತಾಧಿಕಾರಿಗಳು ಹೆಚ್ಚುವರಿ ಬಡ್ತಿಗಳನ್ನು ಮಂಜೂರು ಮಾಡಲು ಹಾಗೂ ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರವು ಅನುಮೋದಿಸಿದೆ.

i) ಕರ್ನಾಟಕ ನಾಗರೀಕ ಸೇವಾ (ಕಾಲಬದ್ಧ ಮುಂಬಡ್ತಿ) ನಿಯಮಗಳು 1983.
ii) ಕರ್ನಾಟಕ ನಾಗರೀಕ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಬಡ್ತಿ) ನಿಯಮಗಳು, 1991.
iii) ಸರ್ಕಾರದ ಆದೇಶ ಸಂಖ್ಯೆ: FD 13 SRC 2002, ದಿನಾಂಕ 9–5–2002 (ಹೆಚ್ಚುವರಿ ವೇತನ ಬಡ್ತಿ).

**ಷರತ್ತುಗಳು:**

1) ಈ ಆದೇಶವು ಕಾಡಾ ಪ್ರಾಧಿಕಾರಗಳಲ್ಲಿ ಕ್ರಮಬದ್ಧವಾಗಿ ನೇಮಕಾತಿ ಹೊಂದಿ ಸಕ್ರಮಗೊಂಡ ನೌಕರರಿಗೆ ಮಾತ್ರ ಅನ್ವಯಿಸತಕ್ಕದ್ದು.
2) ದಿನಾಂಕ 1–7–1984ರ ನಂತರ ಸೇವೆಗೆ ಸೇರಿದ ದಿನಗೂಲಿ ನೌಕರರು/ಗುತ್ತಿಗೆ ಆಧಾರದ ನೌಕರರು/ ಅರೆಕಾಲಿಕ ಸೇವಾ ನೌಕರರಿಗೆ ಈ ಆದೇಶವು ಅನ್ವಯಿಸತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: PWD 388 FC-3/2008, ದಿನಾಂಕ 29–2–2008ರನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 571

**ವೆಂಕಟೇಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಕಾಡಾ)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಚಿತ್ರದುರ್ಗ ಜಿಲ್ಲೆಯ ಚಿತ್ರದುರ್ಗ ನಗರದಲ್ಲಿ ವೀರಸೌಧ ಮತ್ತು ಗಾಂಧೀಭವನ ನಿರ್ಮಾಣಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಂಕಇ 1 ವೀಸೌನಿ 2000 (ಭಾಗ) ದಿನಾಂಕ 28–1–2000.
2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಸನಿ: 137: ವೀರಸೌಧ: 2000–01, ದಿನಾಂಕ 3–12–2007.

**ಪ್ರಸ್ತಾವನೆ :**

ಚಿತ್ರದುರ್ಗ ಜಿಲ್ಲೆ ಚಿತ್ರದುರ್ಗ ನಗರದಲ್ಲಿ ವೀರಸೌಧ ಮತ್ತು ಗಾಂಧಿಭವನ ನಿರ್ಮಾಣಕ್ಕೆ ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 53.00 ಲಕ್ಷಗಳಿಗೆ ಆಡಳಿತಾತ್ಮಕ ಮಂಜೂರಾತಿ ನೀಡಿ ರೂ. 20.00 ಲಕ್ಷಗಳನ್ನು ಬಿಡುಗಡೆ ಮಾಡಲಾಯಿತು. ವೀರಸೌಧ ಕಟ್ಟಡದ ಕಾಮಗಾರಿ ಅಂದಾಜು ವೆಚ್ಚವು ರೂ. 26.00 ಲಕ್ಷಗಳಾಗಿದ್ದು, ಆ ಕಟ್ಟಡದ ಉಳಿದ ಕಾಮಗಾರಿಗಳಿಗೆ ರೂ. 6.00 ಲಕ್ಷಗಳ ಅನುದಾನ ಹಾಗೂ ಗಾಂಧೀಭವನ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳಲು ರೂ. 33.00 ಲಕ್ಷಗಳ ಅನುದಾನವನ್ನು ಜಿಲ್ಲಾದಿಕಾರಿಗಳು ಕೋರಿರುತ್ತಾರೆಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ನಿರ್ದೇಶಕರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ತಿಳಿಸುತ್ತಾ ಸದರಿ ಎಲ್ಲಾ ಕಾಮಗಾರಿಗಳನ್ನು ಪೂರ್ಣಗೊಳಿಸಲು ರೂ. 10.00 ಲಕ್ಷಗಳನ್ನು ಬಿಡುಗಡೆ ಮಾಡಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 4 ವೀಸೌನಿ 2007, ಬೆಂಗಳೂರು, ದಿನಾಂಕ: 26ನೇ ಫೆಬ್ರವರಿ 2008.**

ಚಿತ್ರದುರ್ಗದಲ್ಲಿ ನಿರ್ಮಿಸುತ್ತಿರುವ ವೀರಸೌಧ ಮತ್ತು ಗಾಂಧೀಭವನ ಕಟ್ಟಡಗಳ ನಿರ್ಮಾಣದ ಬಾಕಿ ವೆಚ್ಚಕ್ಕಾಗಿ ರೂ. 10.00 ಲಕ್ಷಗಳನ್ನು (ರೂಪಾಯಿ ಹತ್ತು ಲಕ್ಷಗಳು ಮಾತ್ರ) ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು, ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಅವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಿರುತ್ತದೆ:

ಎ) ಯಾವ ಉದ್ದೇಶಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಭರಿಸತಕ್ಕದ್ದು.

ಬಿ) ಹಣವನ್ನು ಸದರಿ ಉದ್ದೇಶಕ್ಕೆ ಬಳಕೆಯಾಗಿರುವ ಕುರಿತು ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.

ಸಿ) ನಿರ್ಮಾಣ ಕಾಮಗಾರಿಯನ್ನು ಸಂಬಂಧಪಟ್ಟ ಕಾರ್ಯಪಾಲಕ ಇಂಜಿನಿಯರ್ ಅವರ ಮೇಲುಸ್ತುವಾರಿಯಲ್ಲಿ ನಡೆಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಪೂರಕ ಆಯವ್ಯಯ ಲೆಕ್ಕಶೀರ್ಷಿಕೆ 2205–00–101–0–07–101 (ಯೋಜನೆ) ಅಡಿ ಭರಿಸತಕ್ಕದ್ದು.

ಈ ಆದೇಶವನ್ನು ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಂದಿಗೆ ಸಮಾಲೋಚಿಸಿ ಇಲಾಖೆಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 407

**ಪೆಮ್ಮಂಡ ಎಸ್. ರಾಣಿ**
ಪೀಠಾಧಿಕಾರಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು ಮತ್ತು ಶ್ರೀಮತಿ ಎಂ. ಶಶಿರೇಖಾ, ಬೆರಳಚ್ಚುಗಾರ್ತಿ, ಇವರುಗಳ ವಿರುದ್ಧ ಇಲಾಖಾ ವಿಚಾರಣೆಯ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ: ಡಿಪಿಎನ್/ಸಿಆರ್–02/2002, ದಿನಾಂಕ 29–10–2002 ಮತ್ತು ದಿನಾಂಕ 15–9–2003.
2. ಕಾರಣ ಕೇಳುವ ತಿಳುವಳಿಕೆ ಪತ್ರಗಳ ಸಂಖ್ಯೆ: ಲಾ 222 ಎಲ್ಎಂಸಿ 2002 ದಿ: 16–12–2003.
3. ಸದರಿ ಅಧಿಕಾರಿಯವರ ಸಮಜಾಯಿಷಿ ಪತ್ರ ದಿ: 12–1–2004.
4. ಸರ್ಕಾರಿ ಆದೇಶ ಸಂಖ್ಯೆ: ಒಇ 275 ಪಿಪಿಇ 2005, ದಿನಾಂಕ 28–1–2006, 9–5–2006.
5. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ದಿನಾಂಕ 30–8–2007.
6. 2ನೇ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಒಇ 26 ಪಿಪಿಇ 2005, ದಿ: 5–11–2007.
7. ಆರೋಪಿತ ಅಧಿಕಾರಿಯ ಸಮಜಾಯಿಷಿ ಪತ್ರ ದಿನಾಂಕ 7–12–2007.

**ಪ್ರಸ್ತಾವನೆ :**

ಈ ಪ್ರಕರಣದ ಆಪಾಧಿತ ಅಧಿಕಾರಿಯಾದ ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು, ಮಡಿಕೇರಿ ಇವರು ಬೆಂಗಳೂರಿನ ಸಿಎಂಎಂ ನ್ಯಾಯಾಲಯದಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ (i) ಸದರಿ ನ್ಯಾಯಾಲಯದಲ್ಲಿ 8 ಪ್ರಕರಣಗಳಿಗೆ ಸಂಬಂಧಿಸಿದಂತೆ ನ್ಯಾಯಾಲಯದಿಂದ ತೀರ್ಪಿನ ಪ್ರತಿಗಳನ್ನು ಪಡೆಯಲು ಅರ್ಜಿ ಸಲ್ಲಿಸಿ ಅವುಗಳನ್ನು ಪಡೆಯದಿರುವ ಬಗ್ಗೆ (ii) ಬಿಡುಗಡೆಯಾದ, ದೋಷಮುಕ್ತವಾದ 17 ಮೊಕದ್ದಮೆಗಳ ತೀರ್ಪಿನ ಪ್ರತಿಗಳಿಗೆ ಅರ್ಜಿ ಸಲ್ಲಿಸಲು ಯಾವುದೇ ಕ್ರಮ ಕೈಗೊಳ್ಳದೆ ಇರುವ ಬಗ್ಗೆ (iii) ನ್ಯಾಯಾಲಯದಲ್ಲಿ ವಿಲೇವಾರಿ ಆದ ಪ್ರಕರಣಗಳ ತೀರ್ಪಿನ ಮತ್ತು ಆದೇಶಗಳಿಗೆ ಅರ್ಜಿ ಸಲ್ಲಿಸಿ ಅವುಗಳ ದೃಢೀಕೃತ ಕರಡು ಅಭಿಪ್ರಾಯದೊಂದಿಗೆ ಸಲ್ಲಿಸದೇ ಮತ್ತು ಸದರಿ ಕಛೇರಿ ಸಿಬ್ಬಂದಿ ವರ್ಗದವರಿಗೆ ವಹಿಸಿದ ಕೆಲಸ ಕಾರ್ಯಗಳನ್ನು ಸರಿಯಾಗಿ ನಿರ್ವಹಿಸುತ್ತಿರುವ ಬಗ್ಗೆ ಪರಿಶೀಲನೆ ಮಾಡದೆ ಕರ್ತವ್ಯಲೋಪ ಎಸಗಿರುವ ಬಗ್ಗೆ ಮತ್ತು ಶ್ರೀಮತಿ ಎಂ. ಶಶಿರೇಖಾ, ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಸಿಎಂಎಂ ನ್ಯಾಯಾಲಯ, ಬೆಂಗಳೂರು ಇಲ್ಲಿ ಬೆರಳಚ್ಚುಗಾರ್ತಿ–ವ–ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಬೆಂಗಳೂರಿನ ಮಹಿಳಾ ಸಮಾಜಕ್ಕೆ ಸಂಬಂಧಿಸಿದ (ಸಿಸಿ ನಂ. 787/92 ಮತ್ತು ಇತರೆ 7) ಪ್ರಕರಣಗಳ ಮಾಹಿತಿ ಕೋರಿದ್ದ ಸದರಿ ಸಮಾಜದ ಶ್ರೀಮತಿ ಸುಬ್ಬಲಕ್ಷ್ಮಿ ಎಂಬುವರಿಗೆ ಸರಿಯಾಗಿ ಮಾಹಿತಿ ನೀಡದೆ ಬೇಜಾವಾಬ್ದಾರಿಯಿಂದ ವರ್ತಿಸಿರುವ ಬಗ್ಗೆ ಮತ್ತು ಸದರಿ ನ್ಯಾಯಾಲಯದ ಬಿಡುಗಡೆಯಾದ, ದೋಷಮುಕ್ತವಾದ 17 ಮೊಕದ್ದಮೆಗಳ ತೀರ್ಪಿನ ಪ್ರತಿಗಳಿಗೆ ಅರ್ಜಿ ಸಲ್ಲಿಸಲು ಯಾವುದೇ ಕ್ರಮ ಕೈಗೊಳ್ಳದೆ ತಮಗೆ ವಹಿಸಿದ ಕಛೇರಿಯ ಕೆಲಸಗಳನ್ನು ಸರಿಯಾಗಿ ನಿರ್ವಹಿಸದೆ ಇರುವ ಬಗ್ಗೆ ಸದರಿ ಅಧಿಕಾರಿ ಮತ್ತು ನೌಕರರ ವಿರುದ್ಧ ಕ್ರಮ ಜರುಗಿಸುವಂತೆ ಮೇಲೆ (1)ರಲ್ಲಿ ಓದಲಾಗಿರುವ ಪತ್ರದಲ್ಲಿ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರು ಸರ್ಕಾರವನ್ನು ಕೋರಿರುತ್ತಾರೆ.

ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು, ಬೆಂಗಳೂರು ಸಿಎಂಎಂ ನ್ಯಾಯಾಲಯದಲ್ಲಿ ಹಿರಿಯ ಸಹಾಯಕ ಸರ್ಕಾರಿ ಅಭಿಯೋಜಕರಾಗಿ ಮತ್ತು ಶ್ರೀಮತಿ ಎಂ. ಶಶಿರೇಖಾ, ಬೆರಳಚ್ಚುಗಾರ್ತಿ–ವಾ–ಸಹಾಯಕರು ಇವರಿಗೆ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ದೋಷಾರೋಪಣಪಟ್ಟಿ ಅನುಬಂಧ–1 ರಿಂದ 4ರ ವರೆಗೆ ಜಾರಿ ಮಾಡಿ ತಮ್ಮ ಮೇಲಿನ ಆಪಾದನೆಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸುವಂತೆ ಮೇಲೆ (2)ರಲ್ಲಿ ಓದಲಾಗಿರುವ ಕಾರಣ ಕೇಳುವ ತಿಳುವಳಿಕೆ ಪತ್ರದಲ್ಲಿ ತಿಳಿಸಲಾಗಿದ್ದಿತು.

ಮೇಲೆ (3)ರಲ್ಲಿ ಓದಲಾಗಿರುವ ಪತ್ರದಲ್ಲಿ ಆರೋಪಿತ ಅಧಿಕಾರಿಯು ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಆದರೆ ಆರೋಪಿತ ನೌಕರಳಾದ ಶ್ರೀಮತಿ ಎಂ. ಶಶಿರೇಖಾ ಯಾವುದೇ ಲಿಖಿತ ಹೇಳಿಕೆಯನ್ನು ನೀಡಿರುವುದಿಲ್ಲ. ಈ ಬಗ್ಗೆ ಆರೋಪಿತ ಅಧಿಕಾರಿ ಶ್ರೀ ಸುದೀಪ್ ಬಂಗೇರಾ ಇವರು ಸಲ್ಲಿಸಿರುವ ವಿವರಣೆಯು ಸಮಂಜಸವಾಗಿಲ್ಲದಿರುವುದರಿಂದ ಮತ್ತು ಆರೋಪಿತ ನೌಕರಳು ಶ್ರೀಮತಿ ಎಂ. ಶಶಿರೇಖಾ ಇವರು ಯಾವುದೇ ಸಮಜಾಯಿಷಿ ಸಲ್ಲಿಸದೆ ಇರುವುದರಿಂದ ಆರೋಪಗಳ ಸತ್ಯಸತ್ಯತೆಯನ್ನು ಕಂಡುಕೊಳ್ಳುವ ಸಲುವಾಗಿ ಮೇಲೆ (4)ರಲ್ಲಿ ಓದಲಾಗಿರುವ 9–5–2006ರಲ್ಲಿ ಇಲಾಖಾ ವಿಚಾರಣಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (5)ರಲ್ಲಿ ಓದಲಾಗಿರುವ 30–8–2007ರಲ್ಲಿ ವಿಚಾರಣಾಧಿಕಾರಿಯವರು ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು ಇವರ ಮೇಲಿನ ಎಲ್ಲಾ ಆರೋಪಗಳು ರುಜುವಾತಾಗಿರುತ್ತವೆಂದೂ ಶ್ರೀಮತಿ ಎಂ. ಶಶಿರೇಖಾ, ಬೆರಳಚ್ಚುಗಾರ್ತಿ ಮೇಲಿನ ಆರೋಪಗಳು ರುಜುವಾತಾಗಿರುವುದಿಲ್ಲವೆಂದೂ ನಿಷ್ಕರ್ಷೆ ನೀಡಿರುತ್ತಾರೆ.

ಮೇಲೆ (6)ರಲ್ಲಿ ಓದಲಾಗಿರುವ 5–11–2007ರ 2ನೇ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಆರೋಪಿತ ಸರ್ಕಾರಿ ಅಧಿಕಾರಿಗೆ ಒದಗಿಸಿ ಅವರ ಹೇಳಿಕೆಯನ್ನು ನೀಡಲು 30 ದಿನಗಳ ಕಾಲಾವಕಾಶವನ್ನು ನೀಡಲಾಗಿತ್ತು. ಆರೋಪಿತ ಸರ್ಕಾರಿ ಅಧಿಕಾರಿಯು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸಿ ತಮ್ಮ ಮೇಲಿನ ಆರೋಪಗಳನ್ನು ಮತ್ತೊಮ್ಮೆ ನಿರಾಕರಿಸಿ ಸಂಪೂರ್ಣ ಹೊಸ ನಿರ್ಧಾರ ತೆಗೆದುಕೊಳ್ಳುವಂತೆ ಮೇಲೆ (7)ರಲ್ಲಿ ಓದಲಾಗಿರುವ ದಿನಾಂಕ 7–12–2007ರ ಪತ್ರದಲ್ಲಿ ಕೋರಿರುತ್ತಾರೆ. ಆರೋಪಿತ ಸರ್ಕಾರಿ ಅಧಿಕಾರಿಯು ನೀಡಿರುವ ಹೇಳಿಕೆಯು ಸಮಂಜಸವಾಗಿರುವುದಿಲ್ಲವಾದ್ದರಿಂದ ಸದರಿ ಆರೋಪಿತ ಸರ್ಕಾರಿ ಅಧಿಕಾರಿಯ ಮೇಲೆ ಕರ್ನಾಟಕ ಸರ್ಕಾರ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರ ಅನುಸಾರ ನಿಂದನೆ (ವಾಗ್ದಂಡನೆಯನ್ನು) ವಿಧಿಸುವ ಬಗ್ಗೆ ನೇಮಕಾತಿ ಪ್ರಾಧಿಕಾರಿ ಮತ್ತು ಶಿಸ್ತಿನ ಪ್ರಾಧಿಕಾರಿಯು ನಿರ್ಣಯಿಸಿರುತ್ತಾರೆ.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 275 ಪಿಪಿಇ 2005, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2008.**

ಶ್ರೀ ಸುದೀಪ್ ಬಂಗೇರಾ, ಸರ್ಕಾರಿ ಅಭಿಯೋಜಕರು, ಮಡಿಕೇರಿ ಇವರ ವಿರುದ್ಧ ಪ್ರಸ್ತಾವನೆಯಲ್ಲಿ ಮಾಡಲಾಗಿರುವ ಆಪಾದನೆಗಳು ಇಲಾಖಾ ವಿಚಾರಣೆಯಲ್ಲಿ ಸಾಕ್ಷಾಧಾರಗಳಿಂದ ಸಾಬೀತಾಗಿರುವುದರಿಂದ ಇವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(ii)ರನ್ವಯ ವಾಗ್ದಂಡನೆಯನ್ನು ವಿಧಿಸಲಾಗಿದೆ.

ಶ್ರೀಮತಿ ಎಂ. ಶಶಿರೇಖಾ, ಬೆರಳಚ್ಚುಗಾರ್ತಿ–ವ–ಸಹಾಯಕರು, ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, ಶಿಡ್ಲಘಟ್ಟ ಇವರನ್ನು ದಿನಾಂಕ 16–12–2003ರ ನೋಟೀಸಿನಲ್ಲಿ ಮಾಡಲಾದ ಆರೋಪಗಳಿಂದ ಈ ಮೂಲಕ ಮುಕ್ತಗೊಳಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 553

**ಆರ್. ಲೀಲಾವತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾ ಮತ್ತು ಸು ಕಾಫಿಪೋಸ ಮತ್ತು ಅಭಿಯೋಗ)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ :** ಶ್ರೀ ಆರ್.ಟಿ. ಕೃಷ್ಣಮೂರ್ತಿ, ನೋಟರಿ, ಬೆಂಗಳೂರು ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ.

**ಓದಲಾಗಿದೆ:**

1. ಉಪಲೋಕಾಯುಕ್ತರ ಪತ್ರ ಸಂಖ್ಯೆ ಸಿಒಎಂಪಿಟಿ/ಯುಪಿಲೋಕ್/ಬಿಸಿಡಿ/200/2005/ಎಆರ್ಇ–3 ದಿನಾಂಕ 20–4–2005 ಮತ್ತು ರಿಜಿಸ್ಟ್ರಾರ್ ಜನರಲ್, ಉಚ್ಚ ನ್ಯಾಯಾಲಯ ರವರ ಪತ್ರ ಸಂಖ್ಯೆ: ಎಲ್.ಸಿ.ಎ. I/34/2005, ದಿನಾಂಕ 23–2–2005.
2. ಸರ್ಕಾರಿ ಆದೇಶ ಸಂಖ್ಯೆ ಲಾ 53 ಎಲ್‌ಸಿಎಲ್ 2005 ದಿನಾಂಕ 3–4–2005.
3. ಉಚ್ಚ ನ್ಯಾಯಾಲಯದ ರಿಟ್ ಅರ್ಜಿ ಸಂಖ್ಯೆ 5456/2006 (ಜಿಎಂ–ಆರ್‌ಇಎಸ್)ರ ಮಧ್ಯಕಾಲಿಕ ಆದೇಶ ದಿನಾಂಕ 17–4–06 ಮತ್ತು ಆದೇಶ ದಿನಾಂಕ 5–10–2007.
4. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬೆಂಗಳೂರು ಇವರ ದಿನಾಂಕ 13–12–2007ರ ವರದಿ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 20–4–2005ರ ಮತ್ತು 23–2–05ರ ಪತ್ರಗಳೊಂದಿಗೆ ಶ್ರೀ ಆರ್.ಟಿ. ಕೃಷ್ಣಮೂರ್ತಿ, ನೋಟರಿ ಬೆಂಗಳೂರು ಇವರ ವಿರುದ್ಧ ಸ್ವೀಕೃತಗೊಂಡ ದೂರುಗಳ ಕುರಿತಂತೆ ನೋಟರಿ ನಿಯಮಗಳನ್ವಯ ವಿಚಾರಣೆ ನಡೆಸುವುದನ್ನು ಬಾಕಿ ಇಟ್ಟು ನೋಟರಿ ನಿಯಮ 13(12)(ಬಿ)(ii)ರನ್ವಯ ಮೇಲೆ (2)ರಲ್ಲಿ ಓದಲಾದ ದಿನಾಂಕ 8–4–2006ರ ಆದೇಶದಲ್ಲಿ ಶ್ರೀ ಆರ್.ಟಿ. ಕೃಷ್ಣಮೂರ್ತಿ, ನೋಟರಿರವರನ್ನು ಅಮಾನತ್ತಿನಲ್ಲಿ ಇಡಲಾಗಿತ್ತು. ಸದರಿ ಆದೇಶದಕ್ಕೆ ಉಚ್ಚ ನ್ಯಾಯಾಲಯವು ಮೇಲೆ ಓದಲಾದ (3)ರ ದಿನಾಂಕ 17–4–06ರಂದು ಮಧ್ಯಂತರ ಆದೇಶ ನೀಡಿ ತಡೆಯಾಜ್ಞೆ ನೀಡಿತ್ತು. ಉಚ್ಚ ನ್ಯಾಯಾಲಯದಿಂದ ಸರ್ಕಾರದ ಆದೇಶಕ್ಕೆ ತಡೆಯಾಜ್ಞೆ ಇದ್ದುದರಿಂದ, ಶ್ರೀಯುತರ ವಿರುದ್ದದ ದೂರಿನ ಬಗ್ಗೆ ಯಾವುದೇ ಶಿಸ್ತುಕ್ರಮ ಜರುಗಿಸಲು ಸಾಧ್ಯವಾಗಿರುವುದಿಲ್ಲ ಮತ್ತು ಉಚ್ಚ ನ್ಯಾಯಾಲಯವು ಮೇಲೆ (3)ರಲ್ಲಿ ಓದಲಾದ ದಿನಾಂಕ 5–10–07ರ ಆದೇಶದಲ್ಲಿ ಪ್ರಮಾಣ ಪತ್ರವನ್ನು ನವೀಕರಿಸುವ ಮುನ್ನ ನೋಟರಿಯವರ ವಿರುದ್ಧ ಮಾಡಲಾದ ಆಪಾದನೆಗಳ ಬಗ್ಗೆ ಪರಿಶೀಲಿಸಿದ ನಂತರ ಅವರ ಮನವಿ ಪರಿಗಣಿಸುವಂತೆ ಆದೇಶಿಸಿದೆ.

ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ರಿಜಿಸ್ಟ್ರಾರ್, ಸಿಟಿ ಸಿವಿಲ್ ಕೋರ್ಟ್ ಇವರು ಸದರಿ ನೋಟರಿಯವರ ಲಿಖಿತ ವಿವರಣೆ, ಫೊರೆನ್ಸಿಕ್ ಪರಿಶೀಲನಾ ವರದಿ ಹಾಗೂ ವಕೀಲರ ಪರಿಷತ್ತು ವಿಚಾರಣೆ ನಡೆಸಿ ನೋಟರಿಯವರ ವಿರುದ್ಧ ನೀಡಲಾದ ದೂರುಗಳು ಸಾಬೀತಾಗಿಲ್ಲದೆ ಇರುವುದರಿಂದ ವಜಾ ಮಾಡಿರುವ ವರದಿಯನ್ನು, ನೋಟರಿ ಪ್ರಮಾಣ ಪತ್ರ ನವೀಕರಿಸಿಕೊಡುವ ಸಲುವಾಗಿ ಕಳುಹಿಸಿರುತ್ತಾರೆ.

ಮೇಲ್ಕಂಡ ಅಂಶವನ್ನು ಪರಿಗಣಿಸಿ ಶ್ರೀ ಆರ್.ಟಿ. ಕೃಷ್ಣಮೂರ್ತಿಯವರು ನೋಟರಿ ಪ್ರಮಾಣ ಪತ್ರವಿಲ್ಲದೆ ದಿನಾಂಕ 10–12–06ರ ನಂತರ ಕರ್ತವ್ಯನಿರ್ವಹಿಸಿರುವುದನ್ನು ಮೊದಲ ಬಾರಿಗೆ ಮನ್ನಿಸಿ ಎಚ್ಚರಿಕೆ ನೀಡುವ ಮೂಲಕ ಪ್ರಮಾಣ ಪತ್ರವನ್ನು ನವೀಕರಿಸಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 53 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2008.**

ಶ್ರೀ ಆರ್.ಟಿ. ಕೃಷ್ಣಮೂರ್ತಿ, ನೋಟರಿ, ಬೆಂಗಳೂರು (ನಗರ) ರವರನ್ನು ಅಮಾನತ್ತಿನಲ್ಲಿಟ್ಟ ದಿನಾಂಕ 3–4–05ರ ಆದೇಶವನ್ನು ರದ್ದುಗೊಳಿಸಲಾಗಿದೆ ಮತ್ತು ನಿಯಮಾನುಸಾರ ಪ್ರಮಾಣ ಪತ್ರವಿಲ್ಲದೆ ಕರ್ತವ್ಯ ನಿರ್ವಹಿಸಕೂಡದೆಂದು ನೋಟರಿ ನಿಯಮ 13(12)(ಬಿ) (iii) ರನ್ವಯ 'ಎಚ್ಚರಿಕೆ' ನೀಡುವ ಮೂಲಕ ನವೀಕರಣ ಪ್ರಮಾಣ ಪತ್ರ ನೀಡಲು ಆದೇಶಿಸಲಾಗಿದೆ.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 548

**ಶಕುಂತಲಾ ಹೆಚ್.ಅರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಸಹಕಾರ ಸಚಿವಾಲಯ**

**ವಿಷಯ :** ಅರ್ಪಣ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇದರ ಆಡಳಿತಗಾರರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**

1. ಸಹಕಾರ ಸಂಘಗಳ ಉಪನಿಬಂಧಕರು, ಮೈಸೂರು ಜಿಲ್ಲೆ, ಮೈಸೂರು ರವರ ಪತ್ರದ ಸಂ: ಡಿಆರ್‌ಎಂ/ಬಿ–1 ಎಕ್ಸ್‌ಎಸ್‌ಎನ್/47/2007–08, ದಿನಾಂಕ 1–2–2008.
2. ಸಹಕಾರ ಸಂಘಗಳ ಅಪರ ನಿಬಂಧಕರು, ಕೈಗಾರಿಕಾ ಮತ್ತು ಇತರೆ ಇವರ ಪತ್ರ ಸಂಖ್ಯೆ: ಹೆಚ್‌ಎಸ್‌ಜಿ–2/214/ಹೆಚ್‌ಹೆಚ್‌ಎಸ್/2007–08, ದಿನಾಂಕ 16–2–2008.

**ಪ್ರಸ್ತಾವನೆ :**

ಅರ್ಪಣ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಮೈಸೂರು ಇದರ ಆಡಳಿತಗಾರರ ಅವಧಿಯಲ್ಲಿ ಸದರಿ ಸಂಘಕ್ಕೆ ಜಮೀನು ದೊರಕುವಂತೆ ಮಾಡಿರುವುದು ಹಾಗೂ ದೊರಕಿದ ಜಮೀನು ಆಲಿನೇಷನ್ ಮಾಡಿಸುವುದು ಮುಂತಾದ ಶ್ಲಾಘನೀಯ ಕ್ರಮಗಳನ್ನು ಕೈಗೊಂಡಿರುವ ಪ್ರಯುಕ್ತ ಸದರಿ ಆಡಳಿತಗಾರರ ಅವಧಿಯನ್ನು ದಿನಾಂಕ 1–3–2008 ರಿಂದ 31–8–2008ರವರೆಗೆ ವಿಸ್ತರಿಸುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಕೋರಲಾಗಿದ್ದು, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರ ಅಡಿಯಲ್ಲಿ ಸದರಿ ಆಡಳಿತಗಾರರ ಅವಧಿಯನ್ನು ಆಡಳಿತಾತ್ಮಕ ದೃಷ್ಟಿಯಿಂದ ದಿನಾಂಕ 1–3–2008 ರಿಂದ 31–8–2008ರವರೆಗೆ ವಿಸ್ತರಿಸುವಂತೆ ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ಅಪರ ನಿಬಂಧಕರು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 27 ಸಿಎಲ್‌ಎಂ 2008, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2008.**

ಅಪರ್ಣ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮೈಸೂರು ಇದರ ಆಡಳಿತಗಾರರ ಅವಧಿಯನ್ನು ದಿನಾಂಕ 1–3–2008 ರಿಂದ 31–8–2008 ರವರೆಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಅಪರ್ಣ ಗೃಹ ನಿರ್ಮಾಣ ಸಹಕಾರ ಸಂಘ ನಿ., ಮೈಸೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ:

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ "ಒಂದು ವರ್ಷ" ಎಂಬ ಪದಗಳಿಗೆ ಬದಲಾಗಿ "ಹದಿನೆಂಟು ತಿಂಗಳು" ಎಂಬ ಪದಗಳನ್ನು ಪ್ರತ್ಯಾಯೋಜಿಸತಕ್ಕದ್ದು.

**ಸೂಚನೆ:**

1. ಪ್ರಕರಣ 30(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 31–8–2008ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣದ 30(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.
2. ಸದರಿ ಸಂಘದ ಆಡಳಿತ ಮಂಡಳಿಯ ಚುನಾವಣೆಯನ್ನು ದಿನಾಂಕ 31–8–2008ರೊಳಗೆ ನಡೆಸತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 549

**ಆರ್.ಎಸ್. ಹುಚ್ಚಾಚಾರಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,

ಸಹಕಾರ ಇಲಾಖೆ

**ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ**

**ವಿಷಯ :** ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯಕ್ಕೆ ಹೊಸದಾಗಿ ಐದು ವಾಹನ ಚಾಲಕರ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** 1. ಈ ಸಚಿವಾಲಯದ ಅನಧಿಕೃತ ಟಿಪ್ಪಣಿ ಸಂಖ್ಯೆ: ಜಂಕಾ/ಚಾಹುಸೃ/37/2007.

2. ಆರ್ಥಿಕ ಇಲಾಖೆಯ ಪತ್ರ ಸಂಖ್ಯೆ: ಆಇ: 349: ವೆಚ್ಚ–7: 2008, ದಿನಾಂಕ 19–3–2008.

**ಪ್ರಸ್ತಾವನೆ :**

ಕರ್ನಾಟಕ ವಿಧನ ಪರಿಷತ್ತಿನ ಸಚಿವಾಲಯದ ಶಾಸಕರ ಭವನದಲ್ಲಿ 33 ವಾಹನಗಳಿದ್ದು, 24 ಜನ ವಾಹನ ಚಾಲಕರು ಕಾರ್ಯನಿರ್ವಹಿಸುತ್ತಿದ್ದಾರೆ. ವಾಹನ ಚಾಲಕರುಗಳ ಕೊರತೆಯಿಂದ ಮಾನ್ಯ ಸದಸ್ಯರುಗಳಿಗೆ ದಿನ ನಿತ್ಯದ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಲು ಅನಾನುಕೂಲವಾಗಿದ್ದು, ಉತ್ತಮ ಸೇವೆ ನೀಡುವ ದೃಷ್ಟಿಯಿಂದ 5 ವಾಹನ ಚಾಲಕರುಗಳ ಹುದ್ದೆಗಳನ್ನು ಸೃಜಿಸುವಂತೆ ಓದಲಾಗಿರುವ ಕ್ರಮ ಸಂಖ್ಯೆ (1)ರ ಅನಧಿಕೃತ ಟಿಪ್ಪಣಿಯಲ್ಲಿ ಮಾನ್ಯ ಸಭಾಪತಿಯವರ ಅನುಮೋದನೆಯೊಂದಿಗೆ ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು.

ಅದರಂತೆ ಕ್ರಮ ಸಂಖ್ಯೆ (2)ರಲ್ಲಿ ಆರ್ಥಿಕ ಇಲಾಖೆಯು 5 ವಾಹನ ಚಾಲಕರ ಹುದ್ದೆಗಳನ್ನು ಸೃಜಿಸಿಕೊಳ್ಳಲು ಸಹಮತಿ ನೀಡಿರುತ್ತಾರೆ.

**ಆದೇಶ ಸಂಖ್ಯೆ: ಕವಿಪ: ಆ–1:53:ವಾಚಾಹುಸೃ:2008, ಬೆಂಗಳೂರು, ದಿನಾಂಕ: 27ನೇ ಮಾರ್ಚ್ 2008.**

ಮಾನ್ಯ ಸದಸ್ಯರುಗಳಿಗೆ ಉತ್ತಮ ಸೇವೆ ನೀಡುವ ದೃಷ್ಟಿಯಿಂದ ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯದಲ್ಲಿ ವಾಹನ ಚಾಲಕರುಗಳ ಐದು ಹುದ್ದೆಗಳನ್ನು ಈ ಕೂಡಲೇ ಜಾರಿಗೆ ಬರುವಂತೆ ಸೃಜಿಸಲಾಗಿದೆ.

ಸಭಾಪತಿಯವರ ಆದೇಶಾನುಸಾರ

ಪಿ.ಆರ್. 557

**ಹೆಚ್.ಡಿ. ನಾಗರಾಜ**

ಅಧೀನ ಕಾರ್ಯದರ್ಶಿ,

ಕರ್ನಾಟಕ ವಿಧಾನ ಪರಿಷತ್ತು

**ಸಹಕಾರ ಸಚಿವಾಲಯ**

**ವಿಷಯ :** ದಿ ಬನಹಟ್ಟಿ ಸಹಕಾರಿ ನೂಲಿನ ಗಿರಣಿ ನಿಯಮಿತ, ಬನಹಟ್ಟಿ ಬಾಗಲಕೋಟೆ ಜಿಲ್ಲೆ, ಇದರ ಆಧುನೀಕರಣ ಯೋಜನೆಗೆ ಆರ್ಥಿಕ ಸಹಾಯಕ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ದಿನಾಂಕ 5–11–2007ರ ಸಂಖ್ಯೆ ಸಿಟಿ 01 ಸಿಐಎಂ 2007ರ ಸರ್ಕಾರದ ಆದೇಶ.

2. ದಿನಾಂಕ 22–2–2008ರ ಸಹಕಾರ ಸಂಘಗಳ ಜಂಟಿ ರಿಜಿಸ್ಟ್ರಾರ್ (ಜವಳಿ) ರವರ ಕೈಜಇ/ ಜಂ.ರಿ./ಜತ/ಭಸನೂಗಿ/ ಆಯೋಮ 2004–05, ಸಂಖ್ಯೆಯ ಪತ್ರ.

**ಪ್ರಸ್ತಾವನೆ :**

ದಿ ಬನಹಟ್ಟಿ ಸಹಕಾರಿ ನೂಲಿನ ಗಿರಣಿ ನಿಯಮಿತ, ಬನಹಟ್ಟಿ, ಬಾಗಲಕೋಟೆ ಜಿಲ್ಲೆ, ಇದರ ಆಧುನೀಕರಣ ಯೋಜನೆಗೆ ರೂ. 13.05 ಕೋಟಿಗಳ ಆರ್ಥಿಕ ಸಹಾಯವನ್ನು ಸರ್ಕಾರವು ಮಂಜೂರು ಮಾಡಿ, ದಿನಾಂಕ 5–11–2007ರಂದು ಸರ್ಕಾರದ ಆದೇಶಗಳನ್ನು ಹೊರಡಿಸಲಾಗಿತ್ತು (ಉಲ್ಲೇಖ 1). ಈ ರೂ. 13.05 ಕೋಟಿಗಳ ಪೈಕಿ, ರೂ. 11.70 ಕೋಟಿಗಳನ್ನು ಅವಧಿ ಸಾಲವನ್ನಾಗಿ ಮತ್ತು ರೂ. 1.35 ಕೋಟಿಗಳನ್ನು ಷೇರು ಬಂಡವಾಳವಾಗಿ ಬಿಡುಗಡೆ ಮಾಡಲು, ಸದರಿ ಮೊತ್ತಗಳನ್ನು ಶೇ. 25, ಶೇ. 50 ಮತ್ತು ಶೇ. 25ರ ಕಂತುಗಳ ಪ್ರಕಾರ ಬಿಡುಗಡೆ ಮಾಡಲು ಈ ಸರ್ಕಾರದ ಆದೇಶದಲ್ಲಿ ಆದೇಶಿಸಿ ಕೆಲವು ಷರತ್ತುಗಳನ್ನು ವಿಧಿಸಲಾಗಿರುತ್ತದೆ. ವಿಧಿಸಲಾಗಿರುವ ಷರತ್ತುಗಳ ಪ್ರಕಾರ ದಿನಾಂಕ 15–2–2008ರಂದು ಗಿರಣಿ ಮತ್ತು ಸರ್ಕಾರದ ನಡುವೆ ಸಾಲದ ಒಡಂಬಡಿಕೆಯನ್ನು ಮಾಡಿಕೊಳ್ಳಲಾಗಿರುತ್ತದೆ.

ಮೇಲ್ಕಂಡ ಆದೇಶದನ್ವಯ ಸದರಿ ಗಿರಣಿಗೆ ಮಂಜೂರು ಮಾಡಲು ಆದೇಶಿಸಿರುವ ಆರ್ಥಿಕ ಸಹಾಯದ ಶೇ. 25ರಷ್ಟನ್ನು ಈಗ ಗಿರಣಿಗೆ ಬಿಡುಗಡೆ ಮಾಡಬೇಕಾಗಿರುವುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 01 ಸಿಐಎಂ 2005, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ದಿ ಬನಹಟ್ಟಿ ಸಹಕರಿ ನೂಲಿನ ಗಿರಣಿ ನಿಯಮಿತ, ಬನಹಟ್ಟಿ, ಬಾಗಲಕೋಟೆ ಜಿಲ್ಲೆ, ಇದರ ಆಧುನೀಕರಣ ಯೋಜನೆಗೆ ಮಂಜೂರು ಮಾಡಿರುವ ರೂ. 11.70 ಕೋಟಿಗಳ ಅವಧಿ ಸಾಲದ ಪೈಕಿ ರೂ. 2.925 ಕೋಟಿಗಳನ್ನು ಹಾಗೂ ಷೇರು ಬಂಡವಾಳದ ಮೊತ್ತದ ರೂ. 1.35 ಕೋಟಿಗಳ ಪೈಕಿ ರೂ. 0.3375 ಕೋಟಿಗಳನ್ನು ಬಿಡುಗಡೆ ಮಾಡಲು ಈ ಮೂಲಕ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಮೇಲ್ಕಂಡಂತೆ ಮಂಜೂರು ಮಾಡಲಾದ ಮೊಬಲಗುಗಳ ಪೈಕಿ ಸಾಲಕ್ಕೆ ಸಂಬಂಧಿಸಿದಂತೆ ರೂ. 2925 ಕೋಟಿಗಳನ್ನು ಸಾದಿಲ್ವಾರು ನಿಧಿ ಲೆಕ್ಕಶಿರ್ಷಿಕೆ "8000–00–660–0–00 ಸಹಕಾರಿ ಸಾಲಗಳು" ಇದರಲ್ಲಿ ಹಾಗೂ ಷೇರು ಬಂಡವಾಳದ ಮೊತ್ತ ರೂ. 0.3375 ಕೋಟಿಗಳನ್ನು ಸಾದಿಲ್ವಾರು ನಿಧಿ ಲೆಕ್ಕಶೀರ್ಷಿಕೆ "8000–00–498–0–00–

ಸಹಕಾರಗಳಿಗಾಗಿ ಸಾಲ" ಇವುಗಳಲ್ಲಿ ವಿಂಗಡಣೆ ಮಾಡಿ ಕ್ರಮವಾಗಿ ಲೆಕ್ಕಶೀರ್ಷಿಕೆ "6860–01–101–0–07" ಮತ್ತು "4860–01–190–5–01" ಇವುಗಳಿಂದ ಪೂರಕ ಅಂದಾಜುಗಳ ಮೂಲಕ ನಿಧಿಗೆ ಮರು ತುಂಬಲಾಗುವುದು." ಆರ್ಥಿಕ ಇಲಾಖೆಯು ಈ ಮೊಬಲಗನ್ನು ಸಾದಿಲ್ವಾರು ನಿಧಿಯಿಂದ ಬಿಡುಗಡೆ ಮಾಡಿ ಪ್ರತ್ಯೇಕ ಆದೇಶವನ್ನು ಹೊರಡಿಸುವುದು. ಆರ್ಥಿಕ ಇಲಾಖೆಯ ಈ ಪ್ರತ್ಯೇಕ ಆದೇಶವಿಲ್ಲದೆ ಈ ಆದೇಶದ ಮೇಲೆಯೇ ಮೊಬಲಗನ್ನು ಪಡೆಯುವಂತಿಲ್ಲ. ಹಣ ಪಡೆಯುವ ಅಧಿಕಾರಿಯು ಸಾದಿಲ್ವಾರು ನಿಧಿಯಿಂದ ಹಣವನನು ಪಡೆಯಲು ಬಿಲ್ಲನ್ನು ಖಜಾನೆಗೆ ಸಲ್ಲಿಸಿದಾಗ ಇಲಾಖೆಯ ಆದೇಶಕ್ಕೆ ಆರ್ಥಿಕ ಇಲಾಖೆಯು ಹೊರಡಿಸುವ ಪ್ರತ್ಯೇಕ ಆದೇಶವನ್ನು ಲಗತ್ತಿಸಿದ ನಂತರವೇ ಖಜಾನೆಯು ಹಣವನ್ನು ಬಿಡುಗಡೆ ಮಾಡಲು ಕ್ರಮ ತೆಗೆದುಕೊಳ್ಳುವುದು.

ಈ ಆದೇಶದ ಮೂಲಕ ಬಿಡುಗಡೆ ಮಾಡಲಾಗುತ್ತಿರುವ ಅವಧಿ ಸಾಲದ ಮತ್ತು ಷೇರು ಬಂಡವಾಳದ ಕಂತುಗಳು ದಿನಾಂಕ 5–11–2007ರಂದು (ಉಲ್ಲೇಖ 1) ಹೊರಡಿಸಿರುವ ಆದೇಶದಲ್ಲಿ ಹೇಳಲಾಗಿರುವ ಷರತ್ತುಗಳು ಮತ್ತು ದಿನಾಂಕ 15–2–2008ರಂದು ಸಹಿ ಮಾಡಿರುವ ಸಾಲದ ಒಡಂಬಡಿಕೆಯಲ್ಲಿ ಹೇಳಲಾಗಿರುವ ಷರತ್ತುಗಳು ಮತ್ತು ನಿಬಂಧನೆಗಳಿಗೆ ಒಳಪಟ್ಟಿರುತ್ತದೆ.

ಹಣ ಸಂದಾಯ ಸ್ವೀಕೃತಿಯ ಮೇಲೆ ಜವಳಿ ಅಭಿವೃದ್ಧಿ ಆಯುಕ್ತರು ಮತ್ತು ನಿರ್ದೇಶಕರು, ಕೈಮಗ್ಗ ಮತ್ತು ಜವಳಿ ಇಲಾಖೆ, ಬೆಂಗಳೂರು ಇವರ ಮೇಲು ರುಜುವಿನೊಂದಿಗೆ ಹಣವನ್ನು ಖಜಾನೆಯಿಂದ ಪಡೆದು ಸದರಿ ಗಿರಣಿಗೆ ಬಿಡುಗಡೆ ಮಾಡತಕ್ಕದ್ದು.

ಈ ಆದೇಶವನ್ನು ದಿನಾಂಕ 24–3–2008ರ ಸಂಖ್ಯೆ: ಆಇ 112 ವೆಚ್ಚ.2/08ರ ಅನಧಿಕೃತ ಟಿಪ್ಪಣಿ ಮೂಲಕ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 561

**ಸಿ. ಶ್ರೀನಿವಾಸ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಹಕಾರ ಇಲಾಖೆ

**ವಿಷಯ :** ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ ಚುಂಚನಕಟ್ಟೆ, ಕೆ.ಆರ್. ನಗರ ತಾಲ್ಲೂಕು, ಮೈಸೂರು ಜಿಲ್ಲೆ, ಇದರ 2004–05, 2005–06 ಮತ್ತು 2006–07ನೇ ಸಾಲುಗಳ ವಾರ್ಷಿಕ ಸಾಮಾನ್ಯ ಸಭೆಯನ್ನು ನಡೆಸಲು ಕಾಲಾವಕಾಶ ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1. ದಿನಾಂಕ 20–6–2007ರ ಸಂಖ್ಯೆ ಸಿಎಂಡಬ್ಲ್ಯೂ 73 ಸಸಕಾ 2007ರ ಸರ್ಕಾರದ ಆದೇಶ.
2. ದಿನಾಂಕ 7–3–2008 ಡಿಎಸ್‌ಕೆ/ಇಎಸ್‌ಟಿಎಸ್/64/07–08 ಸಂಖ್ಯೆಯ ಕಬ್ಬು ಅಭಿವೃದ್ಧಿ ಆಯುಕ್ತರು ಮತ್ತು ಸಕ್ಕರೆ ನಿರ್ದೇಶಕರ ಪತ್ರ.

**ಪ್ರಸ್ತಾವನೆ :**

ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಚುಂಚನಕಟ್ಟೆ, ಮೈಸೂರು ಜಿಲ್ಲೆ ಇದರ 2004–05, 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ 30–6–2007ರೊಳಗೆ ನಡೆಸಲು ಉಲ್ಲೇಖ (1)ರಲ್ಲಿ ಅನುಮತಿ ನೀಡಲಾಗಿತ್ತು.

ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರು ಉಲ್ಲೇಖ (2)ರ ತಮ್ಮ ಪತ್ರದಲ್ಲಿ ಕಾರ್ಖಾನೆಯನ್ನು ಗುತ್ತಿಗೆ ನೀಡಿ ಹಸ್ತಾಂತರಿಸಿದ್ದರಿಂದ ಕಚೇರಿಯಲ್ಲಿದ್ದ ಸಿಬ್ಬಂದಿಗಳು ಗುತ್ತಿಗೆದಾರರ ಅಧೀನ ಮತ್ತು ನಿಯಂತ್ರಣಕೊಳ್ಳಪಟ್ಟಿದ್ದರಿಂದ ಮತ್ತು ಮಹಾಸಭೆಗೆ ತಗಲುವ ವೆಚ್ಚವನ್ನು ಭರಿಸಲು ರಾಜ್ಯ ಮಟ್ಟದ ಸಲಹಾ ಸಮಿತಿಯಿಂದ ಹಣ ಹಂಚಿಕೆಯಾಗಿಲ್ಲದ್ದರಿಂದ 2004–05 ಹಾಗೂ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ 30–6–2007ರೊಳಗೆ ನಡೆಸಲು ಸಾಧ್ಯವಾಗದಿರುವ ಕಾರಣ 2004–05, 2005–06 ಮತ್ತು 2006–07ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು ದಿನಾಂಕ 30–9–2008ರೊಳಗೆ ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಆಯುಕ್ತರು, ಕಬ್ಬು ಅಭಿವೃದ್ಧಿ ಮತ್ತು ಸಕ್ಕರೆ ನಿರ್ದೇಶಕರ ಪ್ರಸ್ತಾವೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಇ 19 ಸಸಕಾ 2008, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2008**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು, ಶ್ರೀ ಶ್ರೀರಾಮ ಸಹಕಾರಿ ಸಕ್ಕರೆ ಕಾರ್ಖಾನೆ ನಿಯಮಿತ, ಚುಂಚನಕಟ್ಟೆ, ಕೆ.ಆರ್. ನಗರ ತಾಲ್ಲೂಕು, ಮೈಸೂರು ಜಿಲ್ಲೆ, ಇದರ 2004–05, 2005–06 ಮತ್ತು 2006–07ನೇ ಸಾಲುಗಳ ವಾರ್ಷಿಕ ಮಹಾಸಭೆಯನ್ನು 30–9–2008ರೊಳಗೆ ನಡೆಸಲು ಅನುವಾಗುವಂತೆ ಈ ಸಂಘಕ್ಕೆ

ಅಧಿನಿಯಮದ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟುಗಳೊಂದಿಗೆ ಅನ್ವಯವಾಗುತ್ತವೆ ಎಂದು ಆದೇಶಿಸುತ್ತದೆ, ಎಂದರೆ:

**27ರ ಪ್ರಕರಣ**

27ನೇ ಪ್ರಕರಣದ ಉಪ ಪ್ರಕರಣ (1) ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ–

ಅ) 2004–05ನೇ ಸಾಲಿಗೆ ಸಂಬಂಧಿಸಿದಂತೆ "ಮೂವತ್ತಾರು ತಿಂಗಳು"

ಆ) 2005–06ನೇ ಸಾಲಿಗೆ ಸಂಬಂಧಿಸಿದಂತೆ "ಇಪ್ಪತ್ತ ನಾಲ್ಕು ತಿಂಗಳು" ಮತ್ತು

ಇ) 2006–07ನೇ ಸಾಲಿಗೆ ಸಂಬಂಧಿಸಿದಂತೆ "ಹನ್ನೆರಡು ತಿಂಗಳು" ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಟು ದಿನಾಂಕ 30–9–2008ರವರೆಗೆ ಜಾರಿಯಲ್ಲಿದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ 27(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 562

**ಸಿ. ಶ್ರೀನಿವಾಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

**ಶಿಕ್ಷಣ ಸಚಿವಾಲಯ**

**ವಿಷಯ :** ರಹಸ್ಯ ಸೇವಾ ವೆಚ್ಚವನ್ನು ನಿರ್ವಹಿಸಲು ಅಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಪಪೂಶಿಇ/ಲೆಪ/ಆಯವ್ಯಯ/ರಸವೆ/2007–08, ದಿನಾಂಕ 4–9–2007 ಮತ್ತು 18–12–2007.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 4–9–2007ರ ಪತ್ರದಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸಾದಿಲ್ವಾರು ವೆಚ್ಚದ ಕೈಪಿಡಿ 1988ರ ನಿಯಮ–47 (4)ರ ಪ್ರಕಾರ ರಹಸ್ಯ ಸೇವಾ ವೆಚ್ಚವನ್ನು ನಿರ್ವಹಿಸಲು ಅಧಿಕೃತಗೊಂಡ ಪ್ರತಿಯೊಬ್ಬ ಅಧಿಕಾರಿಯ ಸಂಬಂಧವಾಗಿ ಸರ್ಕಾರವು ಒಬ್ಬ ನಿಯಂತ್ರಣಾಧಿಕಾರಿಯನ್ನು ನೇಮಿಸಬೇಕಾಗಿದ್ದು, ಸದರಿ ಅಧಿಕಾರಿಯು ಪ್ರತಿ ಹಣಕಾಸಿನ ವರ್ಷದಲ್ಲಿ ಒಂದು ಸಲ ನಿರ್ವಹಿಸಲಾದ ವೆಚ್ಚದ ಬಗ್ಗೆ ಒಂದು ಪ್ರಮಾಣ ಪತ್ರವನ್ನು ಮಹಾಲೇಖಪಾಲರಿಗೆ ಕಳುಹಿಸಬೇಕಾಗಿದ್ದು, ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ ರಹಸ್ಯ ವೆಚ್ಚ ಮಾಡಲು ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅಧಿಕಾರವಿದ್ದು, ಮಾಡಲಾದ ವೆಚ್ಚದ ಬಗ್ಗೆ ಲೆಕ್ಕ ತನಿಖೆ ಮಾಡಿ, ಮಹಾಲೇಖಪಾಲರಿಗೆ ಪ್ರಮಾಣ ಪತ್ರವನ್ನು ಕಳುಹಿಸಲು ಒಬ್ಬ ಅಧಿಕಾರಿಯನ್ನು ನೇಮಿಸುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 471 ಡಿಪಿಐ 2007, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಸಾದಿಲ್ವಾರು ವೆಚ್ಚದ ಕೈಪಿಡಿ 1988ರ ನಿಯಮ–47 (4)ರ ಪ್ರಕಾರ ಪದವಿ ಪೂರ್ವ ಶಿಕ್ಷಣ ಇಲಾಖೆಯ ರಹಸ್ಯ ಸೇವಾ ವೆಚ್ಚವನ್ನು ಲೆಕ್ಕ ತನಿಖೆ ಮಾಡುವ ಅಧಿಕಾರಿಯನ್ನಾಗಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಇವರನ್ನು ನೇಮಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 566

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು–1,2)

**PLANNING, PROGRAMME MONITORING AND STATISTICS SECRETARIAT**

**No. PD 10 Yogase 07, Bangalore Dated 10th April 2008**

**CIRCULAR**

**Sub :** Empowering the District Level officers viz Chief Executive Officers of Zilla Panchayats & Asst. Commissioners of Revenue Sub Divisions along with Deputy Commissioners for inspection of MPLAD works –reg.

**Read :** G.O. No. PD 02 SASAPRA 2004, Dtd: 7-3-2007 & Corrigendum dtd: 30-1-2008.

In the G.O. Dtd: 7-3-2007 & Corrigendum dtd: 30-1-2008 referred to as above, the Government had delegated the administrative powers to the Deputy Commissioners under MPLAD Sheme. As regarding the implementation of MPLAD works the Chief Executive Officers to Zilla Panchayat and Asst. Commissioners of Revenue Sub Divisions of Karnataka in addition to the Deputy Commissioners of all the districts are hereby authorised to inspect the works taken up under MPLADS. Inspection Reports may sent to the Government in Planning Department on a regular basis.

(Approved by the Principal Secretary
to Government, Planning Department)

**M.R. MAHESH KUMAR**
Under Secretary to Government-1 & 2,
Planning, Programme Monitoring and Statistics Department.

PR. 634

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಎಸ್.ಎಂ. ಪೂಜಾರ್, ಪ್ರಾಚ್ಯವಸ್ತು ಸಂರಕ್ಷಣಾ ಇಂಜಿನಿಯರ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರ ವಿರುದ್ಧ ಮೈಸೂರಿನ ವಿಶೇಷ ನ್ಯಾಯಲಯದಲ್ಲಿ ಜಾರಿಯಲ್ಲಿರುವ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ: 37/1999 – ಅಕ್ರಮ ಆಸ್ತಿ ಮುಟ್ಟುಗೋಲು ಹಾಕಿಕೊಳ್ಳಲು ಅನುಮತಿ ಕೋರಿ ವಿಶೇಷ ನ್ಯಾಯಾಲಯದ ಮುಂದೆ ಮನವಿ ಸಲ್ಲಿಸಲು ತನಿಖಾಧಿಕಾರಿಗಳಿಗೆ ಅಧಿಕಾರಪತ್ರ ನೀಡುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರ ಆದೇಶ ಸಂಖ್ಯೆ: ಡಿಎಎಂ/ಇಎಸ್‌ಟಿ/1/161/ 95–96, ದಿ: 8–10–1998.
2. ಹೆಚ್ಚುವರಿ ಪೊಲೀಸು ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಎ082/ ಸಿಆರ್–20/1995/ಮೈಸೂರ್ ದಿನಾಂಕ 31–7–2006.

**ಪ್ರಸ್ತಾವನೆ :**

ತಮ್ಮ ಆದಾಯದ ಬಲ್ಲ ಮೂಲಗಳಿಗಿಂತ ಅತಿ ಹೆಚ್ಚಿನ ಆಸ್ತಿ ಪಾಸ್ತಿಗಳನ್ನು ಹೊಂದಿದ ಆರೋಪಕ್ಕಾಗಿ ಎಸ್.ಎಂ. ಪೂಜಾರ್, ಹಿಂದಿನ ಪ್ರಾಚ್ಯವಸ್ತು ಸಂರಕ್ಷಣಾ ಸಹಾಯಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ವಿರುದ್ಧ ಸಕ್ಷಮ ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಲೋಕಾಯುಕ್ತ ತನಿಖಾಧಿಕಾರಿಗಳಿಗೆ ಅನುಮತಿ ನೀಡಲಾಯಿತು. ಅದರಂತೆ ಲೋಕಾಯುಕ್ತ ಪೊಲೀಸರಿಂದ ಮೈಸೂರಿನ ವಿಶೇಷ ನ್ಯಾಯಾಲಯದಲ್ಲಿ ದಿನಾಂಕ 27–1–1999ರಂದು ಕ್ರಿಮಿನಲ್ ಮೊಕದ್ದಮೆ ಸಂಖ್ಯೆ 37/1999 ಹೂಡಲ್ಪಟ್ಟು ಅದು ನ್ಯಾಯಾಲಯದ ವಿಚಾರಣೆಯಲ್ಲಿದೆ. ಹೆಚ್ಚುವರಿ ಪೊಲೀಸು ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಎಸ್.ಎಂ. ಪೂಜಾರ್, ಪ್ರಾಚ್ಯವಸ್ತು ಸಂರಕ್ಷಣಾ ಇಂಜಿನಿಯರ್ ಅವರು ಅಕ್ರಮವಾಗಿ ಗಳಿಸಿದ ಹಾಗೂ ಲೋಕಾಯುಕ್ತ ನಡೆಸಿದ ದಾಳಿಯಲ್ಲಿ ಗುರುತಿಸಲಾದ ಆಸ್ತಿಗಳನ್ನು ಮುಟ್ಟುಗೋಲು ಹಾಕಿಕೊಳ್ಳಲು ಸಕ್ಷಮ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಲು ಪ್ರಕರಣದ ತನಿಖಾಧಿಕಾರಿಗಳಿಗೆ ಅನುಮತಿ ನೀಡುವಂತೆ ಕೋರಿದ್ದಾರೆ. ಲೋಕಾಯುಕ್ತದ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಎಸ್.ಎಂ. ಪೂಜಾರ್ ಅವರು ಅಕ್ರಮವಾಗಿ ಗಳಿಸಿದ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳಲು ಅನುಮತಿ ನೀಡುವುದು ಅಗತ್ಯವೆಂದು ನಿರ್ಣಯಿಸಿ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಸಂಕಇ 129 ಕೆಎಂಯು 95(ಭಾ) ಬೆಂಗಳೂರು, ದಿನಾಂಕ: 31ನೇ ಮಾರ್ಚ್ 2008.**

ದಿ ಕ್ರಿಮಿನಲ್ ಲಾ ತಿದ್ದುಪಡಿ ಆರ್ಡಿನೆನ್ಸ್ 1944ರ ಸೆಕ್ಷನ್ 3ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಎಸ್.ಎಂ. ಪೂಜಾರ್, ಪ್ರಾಚ್ಯವಸ್ತು ಸಂರಕ್ಷಣಾ ಇಂಜಿನಿಯರ್, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಅವರು ಅಕ್ರಮವಾಗಿ ಗಳಿಸಿರುವ ಆಸ್ತಿ–ಪಾಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಸಂಬಂಧ ಸಕ್ಷಮ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಲು ಪ್ರಕರಣದ ಲೋಕಾಯುಕ್ತ ಪೊಲೀಸು ತನಿಖಾಧಿಕಾರಿಗೆ ಈ ಮೂಲಕ ಅನುಮತಿ ನೀಡುತ್ತದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

ಪಿ.ಆರ್. 554

**ಶಿಕ್ಷಣ ಸಚಿವಾಲಯ**

**ವಿಷಯ :** ಖಾಸಗಿ ಮುದ್ರಣಾಲಯಗಳಿಗೆ, ಮಾನ್ಯತೆ ನೀಡುವ ಅಧಿಕಾರವನ್ನು ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ದಿನಾಂಕ 28–5–71ರ ಆದೇಶ ಸಂಖ್ಯೆ: ಇಡಿ 194 ಟಿಪಿಎಸ್ 69.

2. ಸರ್ಕಾರದ ದಿನಾಂಕ 1–4–1997ರ ತಿದ್ದುಪಡಿ ಆದೇಶ ಸಂಖ್ಯೆ: ಇಡಿ 126 ಡಿಜಿಒ 96.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 28–5–71ರ ಆದೇಶದನ್ವಯ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಗೆ ಸಂಬಂಧಿಸಿದ ಮುದ್ರಣ ಕೈಪಿಡಿಯನ್ನು ರಚಿಸಲಾಗಿದೆ. ಸದರಿ ಕೈಪಿಡಿಯ ಅಧ್ಯಾಯ 5 ಇತರೆ, ಪ್ಯಾರಾ 95ರಲ್ಲಿ ಹಾಗೂ ಇತರೆ ನಿಗದಿತ ಮಾನದಂಡದ ಪ್ರಕಾರ, ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಇವರು ನೀಡುವ ವರದಿಯನ್ನು ಆಧರಿಸಿ ಖಾಸಗಿ ಮುದ್ರಣಾಲಯಗಳಿಗೆ, ಮಾನ್ಯತೆ ನೀಡುವ ಅಧಿಕಾರವನ್ನು ಸರ್ಕಾರವೇ ಉಳಿಸಿಕೊಂಡಿರುತ್ತದೆ. ಮೇಲೆ (2)ರಲ್ಲಿ ಓದಲಾದ ದಿನಾಂಕ 1–4–1997ರ ಆದೇಶದ ಪ್ರಕಾರ ಖಾಸಗಿ ಮುದ್ರಣಾಲಯಗಳಿಗೆ, ಮಾನ್ಯತೆ ನೀಡುವ ಮಾನದಂಡಗಳಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡಲಾಗಿದೆ.

2. ಖಾಸಗಿ ಮುದ್ರಣಾಲಯಗಳಿಗೆ, ಮುದ್ರಣ ಕೈಪಿಡಿ ಹಾಗೂ ಇತರೆ ನಿಗದಿತ ಮಾನದಂಡದ ಪ್ರಕಾರ, ಮಾನ್ಯತೆ ನೀಡುವ ಅಧಿಕಾರವನ್ನು ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ಇವರಿಗೆ ಪ್ರತ್ಯಾಯೋಜಿಸುವ ಬಗ್ಗೆ ಸರ್ಕಾರವು ನಿರ್ಧರಿಸಿ ಅದರಂತೆ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 115 ಎಲ್‌ಬಿಪಿ 2006, ಬೆಂಗಳೂರು, ದಿನಾಂಕ: 26ನೇ ಮಾರ್ಚ್ 2008.**

3. ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಖಾಸಗಿ ಮುದ್ರಣಾಲಯಗಳಿಗೆ, ಮುದ್ರಣ ಕೈಪಿಡಿಯ ಅಧ್ಯಾಯ 5 ಇತರೆ, ಪ್ಯಾರಾ 95ರಂತೆ ಹಾಗೂ ಇತರೆ ನಿಗದಿತ ಮಾನದಂಡದ ಪ್ರಕಾರ, ಮಾನ್ಯತೆ ನೀಡುವ ಸರ್ಕಾರದ ಹಂತದ ಅಧಿಕಾರವನ್ನು ಸದರಿ ಕೈಪಿಡಿಗೆ ಪ್ರತ್ಯೇಕವಾಗಿ ತಿದ್ದುಪಡಿ ಮಾಡುವುದನ್ನು ಬಾಕಿ ಇಟ್ಟು ನಿರ್ದೇಶಕರು, ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ, ಬೆಂಗಳೂರು ಇವರಿಗೆ ಪ್ರತ್ಯಾಯೋಜಿಸಲಾಗಿದೆ ಹಾಗೂ ಇನ್ನು ಮುಂದೆ ಸ್ವೀಕರಿಸಲಾಗುವ ಎಲ್ಲಾ ಅರ್ಜಿಗಳನ್ನು ನಿರ್ದೇಶಕರು ತಮ್ಮ ಹಂತದಲ್ಲಿಯೇ ನಿಯಮಾನುಸಾರ ಪರಿಶೀಲಿಸಿ ಮಾನ್ಯತೆ ನೀಡುವ ಬಗ್ಗೆ ಕ್ರಮ ಕೈಗೊಳ್ಳಲು ಸಹ ಈ ಮೂಲಕ ಆದೇಶಿಸಲಾಗಿದೆ.

ಭಾರತದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 568

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ

**ಆರ್ಥಿಕ ಸಚಿವಾಲಯ**

**ಸಂಖ್ಯೆ: ಆಇ 3 ಬಿಇಎಂ 2008, ಬೆಂಗಳೂರು ದಿನಾಂಕ 3ನೇ ಏಪ್ರಿಲ್ 2008**

**ಸುತ್ತೋಲೆ**

**ವಿಷಯ :** ಸರ್ಕಾರದ ಆಡಳಿತ ವೆಚ್ಚಗಳಲ್ಲಿ ಮಿತವ್ಯಯ ಸಾಧಿಸುವ ಬಗ್ಗೆ–ದೂರವಾಣಿ ಬಳಕೆಯಲ್ಲಿ ಮಿತವ್ಯಯದ ಸಾಧಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಬಿಇಎಂ 98, ದಿನಾಂಕ 5–11–1998.

2. ತಿದ್ದೋಲೆ ಸಂಖ್ಯೆ ಎಫ್‌ಡಿ 2 ಬಿಇಎಂ 98, ದಿನಾಂಕ 16–8–2000.

3. ತಿದ್ದೋಲೆ ಸಂಖ್ಯೆ: ಎಫ್‌ಡಿ 4 ಬಿಇಎಂ 2007 ದಿನಾಂಕ 10–9–2007.

ಮೇಲಿನ ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 2 ಬಿಇಎಂ 98, ದಿನಾಂಕ 5–11–1998ರಲ್ಲಿ ಸರ್ಕಾರಿ ಅಧಿಕಾರಿಗಳಿಗೆ ಕಛೇರಿಯ ಮತ್ತು ನಿವಾಸದ ದೂರವಾಣಿ ಹೊಂದಲು ಅರ್ಹತೆಯ ಬಗ್ಗೆ ಮಾರ್ಗಸೂಚಿಗಳನ್ನು ನೀಡಲಾಗಿದೆ. ಉಲ್ಲೇಖ (2)ರಲ್ಲಿರುವ ತಿದ್ದೋಲೆ ಸಂಖ್ಯೆ: ಎಫ್‌ಡಿ 2 ಬಿಇಎಂ 95, ದಿನಾಂಕ 16–8–2000ರಲ್ಲಿ ಈ ಆದೇಶವನ್ನು ಮಾರ್ಪಡಿಸಿ ರೂ. 9580–14200 ಹಾಗೂ ಮೇಲ್ಪಟ್ಟ ವೇತನ ಶ್ರೇಣಿಯನ್ನು ಹೊಂದಿರುವ ಅಧಿಕಾರಿಗಳು ಕಛೇರಿ ದೂರವಾಣಿಯನ್ನು ಹೊಂದಲು ಅರ್ಹರಾಗಿರುತ್ತಾರೆ ಮತ್ತು ರೂ. 10620–14960 ಹಾಗೂ ಮೇಲ್ಪಟ್ಟ ವೇತನ ಶ್ರೇಣಿಯನ್ನು ಹೊಂದಿರುವ ಅಧಿಕಾರಿಗಳು ಕಛೇರಿ ಮತ್ತು ನಿವಾಸದ ದೂರವಾಣಿಯನ್ನು ಹೊಂದಲು ಅರ್ಹರಾಗಿರುತ್ತಾರೆ ಎಂದು ತಿಳಿಸಲಾಗಿದೆ. ಉಲ್ಲೇಖ (3)ರಲ್ಲಿರುವ ತಿದ್ದೋಲೆ ಸಂಖ್ಯೆ ಎಫ್‌ಡಿ 4 ಬಿಇಎಂ 2007, ದಿನಾಂಕ 10–9–2007ರಲ್ಲಿ ಈ ತಿದ್ದೋಲೆಯನ್ನು ಮಾರ್ಪಡಿಸಿ ರೂ. 18150–26925 ಹಾಗೂ ಮೇಲ್ಪಟ್ಟ ವೇತನ ಶ್ರೇಣಿಯನ್ನು ಹೊಂದಿರುವ ಅಧಿಕಾರಿಗಳು ಕಛೇರಿ ದೂರವಾಣಿಯನ್ನು ಹೊಂದಲು ಅರ್ಹರಾಗಿರುತ್ತಾರೆ ಮತ್ತು ರೂ. 20025–28275 ಹಾಗೂ ಮೇಲ್ಪಟ್ಟ

ವೇತನ ಶ್ರೇಣಿಯನ್ನು ಹೊಂದಿರುವ ಅಧಿಕಾರಿಗಳು ಕಛೇರಿ ಮತ್ತು ನಿವಾಸದ ದೂರವಾಣಿಯನ್ನು ಹೊಂದಲು ಅರ್ಹರಾಗಿರುತ್ತಾರೆ ಎಂದು ತಿಳಿಸಲಾಗಿದೆ.

2. ಪರಿಷ್ಕೃತ ವೇತನ ನಿಯಮಗಳು, 2007ರನ್ವಯ ಸರ್ಕಾರಿ ನೌಕರರ ವೇತನ ಶ್ರೇಣಿಗಳು ಪರಿಷ್ಕರಣೆಯಾದ ಹಿನ್ನೆಲೆಯಲ್ಲಿ ಈ ತಿದ್ದೋಲೆಯನ್ನು ಹೊರಡಿಸಲಾಗಿದ್ದು, ವೇತನ ಪರಿಷ್ಕರಣೆಯ ಪೂರ್ವದಲ್ಲಿ ದೂರವಾಣಿ ಸೌಲಭ್ಯವನ್ನು ಹೊಂದಿದ್ದು, ಉಲ್ಲೇಖ (3)ರ ತಿದ್ದೋಲೆಯನ್ವಯ ವೇತನ ಶ್ರೇಣಿಯ ಆಧಾರದ ಮೇಲೆ ದೂರವಾಣಿ ಸೌಲಭ್ಯ ಹೊಂದಲು ಅರ್ಹರಾಗದೇ ಇರುವ ಸರ್ಕಾರಿ ಅಧಿಕಾರಿಗಳ ದೂರವಾಣಿ ಬಿಲ್‌ನ್ನು ಪಾವತಿಸಲು ಖಜಾನೆ ಅಧಿಕಾರಿಗಳು ನಿರಾಕರಿಸುತ್ತಿರುವ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಸ್ಪಷ್ಟೀಕರಣವನ್ನು ನೀಡಲಾಗಿದೆ.

3. ಪರಿಷ್ಕೃತ ವೇತನ ನಿಯಮಗಳು, 2007ರನ್ವಯ ಸರ್ಕಾರಿ ವೇತನ ಶ್ರೇಣಿಗಳು ಪರಿಷ್ಕರಣೆಯಾದ ಹಿನ್ನೆಲೆಯಲ್ಲಿ ಆದೇಶ ಸಂಖ್ಯೆ: ಆಇ 2 ಬಿಇಎಂ 98, ದಿ: 5–11–1998ರಲ್ಲಿ ದೂರವಾಣಿ ಅರ್ಹತೆಗೆ ತಿಳಿಸಲಾದ ವೇತನ ಶ್ರೇಣಿಗೆ ಅನುಗುಣವಾಗಿ ತಿದ್ದೋಲೆ ಸಂಖ್ಯೆ ಆಇ 4 ಬಿಇಎಂ 2007, ದಿನಾಂಕ 10–9–2007ರಲ್ಲಿ ಕಛೇರಿ ಮತ್ತು ನಿವಾಸದ ದೂರವಾಣಿ ಸೌಲಭ್ಯವನ್ನು ಹೊಂದಲು ವೇತನ ಶ್ರೇಣಿಗಳನ್ನು ನಿಗದಿಪಡಿಸಲಾಗಿದೆ. ಉಳಿದಂತೆ ದೂರವಾಣಿ ಸೌಲಭ್ಯದ ಅರ್ಹತೆಯ ಬಗ್ಗೆ ಆದೇಶ ಸಂಖ್ಯೆ ಆಇ 2 ಬಿಇಎಂ 98 ದಿ: 5–11–1998ರಲ್ಲಿನ ಇತರ ಮಾರ್ಗಸೂಚಿಗಳಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ. ಈಗಾಗಲೇ ಕಚೇರಿ ಮತ್ತು ನಿವಾಸದ ದೂರವಾಣಿ ಸೌಲಭ್ಯವನ್ನು ಹೊಂದಿರುವ ಅಧಿಕಾರಿಗಳ ದೂರವಾಣಿ ಬಿಲ್ಲುಗಳನ್ನು ಪಾವತಿಸಲು ಕೇವಲ ಪರಿಷ್ಕೃತ ವೇತನ ಶ್ರೇಣಿಯ ಆಧಾರದ ಮೇಲೆ ನಿರಾಕರಿಸಕೂಡದೆಂದು ಖಜಾನಾಧಿಕಾರಿಗಳಿಗೆ ಈ ಮೂಲಕ ಸೂಚಿಸಲಾಗಿದೆ.

**ಸಿ. ಶಾಮರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಎಫ್.ಆರ್ ಮತ್ತು ಬಿ.ಸಿ.ಸಿ.)

ಪಿ.ಆರ್. 635

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಧ್ವನಿ ಮತ್ತು ದೃಶ್ಯ ವಿಭಾಗದಲ್ಲಿರುವ ಕ್ಯಾಸೆಟ್‌ಗಳನ್ನು ಡಿವಿಡಿ/ಸಿ.ಡಿ.ಗೆ ವರ್ಗಾಯಿಸಲು ಹಣ ಮಂಜೂರಾತಿ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರ ಪತ್ರ ಸಂಖ್ಯೆ: ಕಸನಿ/11/ಸಿಡಿವ/2006–07, ದಿನಾಂಕ 29–10–2007 ಹಾಗೂ 10–12–2007.

**ಪ್ರಸ್ತಾವನೆ :**

ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಇವರು ಮೇಲೆ ಓದಲಾದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ನಡೆಸಿಕೊಂಡು ಬಂದಿರುವ ಹಲವಾರು ಪ್ರಮುಖ ಕಾರ್ಯಕ್ರಮಗಳನ್ನು ಹಾಗೂ ವಿವಿಧ ಸಂದರ್ಭಗಳಲ್ಲಿ ಧ್ವನಿ ಮುದ್ರಿಸಿಕೊಳ್ಳಲಾಗಿರುವ ಕಲೆ ಮತ್ತು ಸಾಹಿತ್ಯ ಸಂಸ್ಕೃತಿ ಸಂಬಂಧಿತ ಕಲಾ ಪ್ರಕಾರಗಳನ್ನು ಆಡಿಯೋ ಮತ್ತು ವಿಡಿಯೋ ಕ್ಯಾಸೆಟ್‌ಗಳಲ್ಲಿ ಚಿತ್ರೀಕರಿಸಿ ಸಂಗ್ರಹಿಸಲಾಗಿದ್ದು, ಇವುಗಳು ವಿಷಯ ತಜ್ಞರ ಅಭಿಪ್ರಾಯದಂತೆ ದಿನದಿಂದ ದಿನಕ್ಕೆ ಗುಣಮಟ್ಟ ಕಡಿಮೆಯಾಗುತ್ತಿರುವುದರಿಂದ ಮುಂದಿನ ಪೀಳಿಗೆಗೂ ಪರಿಚಯಿಸುವ ಉದ್ದೇಶದಿಂದ ಅವುಗಳನ್ನು ಸಂರಕ್ಷಿಸುವುದು ಅತ್ಯವಶ್ಯಕವಾಗಿರುವುದರಿಂದ ಸದರಿ ಕ್ಯಾಸೆಟ್‌ಗಳನ್ನು ಡಿ.ವಿ.ಡಿ. /ಸಿ.ಡಿ.ಗೆ ವರ್ಗಾಯಿಸಲು ಉದ್ದೇಶಿಸಲಾಗಿದೆ ಎಂದು ತಿಳಿಸಿರುತ್ತಾರೆ. ಇದಕ್ಕಾಗಿ ದಿನಪತ್ರಿಕೆಗಳಲ್ಲಿ ಟೆಂಡರ್ ಮೂಲಕ ದರಪಟ್ಟಿ ಕರೆಯಲಾಗಿದ್ದು, ಅದರಂತೆ ಕಡಿಮೆ ದರಪಟ್ಟಿ ನೀಡಿರುವ ಮಧು ಎಲೆಕ್ಟ್ರಾನಿಕ್ಸ್ ನಂ. 358, 1ನೇ ಮಹಡಿ, 18ನೇ ಮುಖ್ಯರಸ್ತೆ, ನಂದಿನಿ ಲೇಔಟ್, ಬೆಂಗಳೂರು–96 ರವರ ದರಗಳನ್ನು ಒಪ್ಪಲಾಗಿದ್ದು, ಇದಕ್ಕಾಗಿ ತಗಲುವ ರೂ. 6.00 ಲಕ್ಷಗಳನ್ನು ಹಾಗೂ ದಿನಪತ್ರಿಕೆಯಲ್ಲಿ ಟೆಂಡರನ್ನು ಕರೆಯಲು ತಗಲಿದ ವೆಚ್ಚ ರೂ. 24,000/– ಗಳನ್ನು ವೆಚ್ಚ ಮಾಡಲು ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ.

**ಆದೇಶ ಸಂಖ್ಯೆ: ಕಸಂವಾಪ್ರ 228 ಕಸನಿ 2007, ಬೆಂಗಳೂರು, ದಿನಾಂಕ: 24ನೇ ಮಾರ್ಚ್ 2008.**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಧ್ವನಿ ಮತ್ತು ದೃಶ್ಯ ವಿಭಾಗದಲ್ಲಿರುವ ಕ್ಯಾಸೆಟ್‌ಗಳನ್ನು ಡಿವಿಡಿ/ಸಿ.ಡಿ.ಗೆ ವರ್ಗಾಯಿಸಲು ಮಧು ಎಲೆಕ್ಟ್ರಾನಿಕ್ಸ್ ನಂ. 358, 1ನೇ ಮಹಡಿ, 18ನೇ ಮುಖ್ಯರಸ್ತೆ, ನಂದಿನಿ ಲೇಔಟ್, ಬೆಂಗಳೂರು–96 ಇವರ ಮೂಲಕ ನಿರ್ವಹಿಸಲಾಗಿರುವ ಕಾರ್ಯಕ್ಕೆ ರೂ. 6.00 ಲಕ್ಷಗಳನ್ನು ಹಾಗೂ ಈ ಸಂಬಂಧವಾಗಿ ದಿನಪತ್ರಿಕೆಯಲ್ಲಿ ಟೆಂಡರನ್ನು ಕರೆಯಲು ತಗಲಿದ ವೆಚ್ಚ ರೂ. 24,000/–ಗಳು ಅಂದರೆ ಒಟ್ಟು ರೂ. 6,24,000/–ಗಳನ್ನು (ರೂಪಾಯಿ ಆರು ಲಕ್ಷದ ಇಪ್ಪತ್ನಾಲ್ಕು ಸಾವಿರಗಳು ಮಾತ್ರ) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2205–00–102–4–01–015 (ಯೋಜನೆ) ಇದರಡಿಯಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಡನೆ ಸಮಾಲೋಚಿಸಿ, ಇಲಾಖೆಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 564

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ವಿಷಯ :** ಬಸವಸಾಗರ ಹಿನ್ನೀರಿನಿಂದ ಮುಳಗಡೆಯಾಗಿರುವ ಶರಣ ಹಡಪದ ಅಪ್ಪಣ್ಣ ನೀಲಮ್ಮನವರ ಐಕ್ಯಸ್ಥಳ ಸಂರಕ್ಷಿಸಲು ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಸನಿ/22/ ಹೊಯೋ/2007–08, ದಿ: 13–3–2008.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಬಾಗಲಕೋಟೆ ಜಿಲ್ಲೆಯ ಬಸವಸಾಗರ ಹಿನ್ನೀರಿನಿಂದ ಮುಳುಗಡೆಯಾಗಿರುವ ಶರಣ ಹಡಪದ ಅಪ್ಪಣ್ಣ ನೀಲಮ್ಮನವರ ಐಕ್ಯಸ್ಥಳ ಸಂರಕ್ಷಿಸಲು ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಬೇಕೆಂದು ಈ ಸಂಬಂಧವಾಗಿ ಕೂಡಲ ಸಂಗಮ ಅಭಿವೃದ್ಧಿ ಪ್ರಾಧಿಕಾರದ ಆಯುಕ್ತರು ಯಾವುದೇ ಅಂದಾಜು ಪಟ್ಟಿ ಹಾಗೂ ನೀಲಿ ನಕಾಶೆ ಇವುಗಳನ್ನು ಒದಗಿಸಿಲ್ಲವೆಂದು ವರದಿ ಮಾಡುತ್ತಾ ಆರ್ಥಿಕ ವರ್ಷವು ಮುಗಿಯುತ್ತಾ ಬಂದಿರುವುದರಿಂದ ಆಯವ್ಯಯದಲ್ಲಿ ಹಂಚಿಕೆಯಾಗಿರುವ ಹಣವನ್ನು ಬಿಡುಗಡೆ ಮಾಡಬೇಕೆಂದು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 128 ಕಸನಿ 2007, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2008.**

ಬಾಗಲಕೋಟೆ ಜಿಲ್ಲೆಯ ಬಸವಸಾಗರ ಹಿನ್ನೀರಿನಿಂದ ಮುಳುಗಡೆಯಾಗಿರುವ ಶರಣರ ಹಡಪದ ಅಪ್ಪಣ್ಣ ನೀಲಮ್ಮನವರ ಐಕ್ಯಸ್ಥಳ ಸಂರಕ್ಷಿಸುವ ಸಲುವಾಗಿ ರೂ. 50.00 ಲಕ್ಷಗಳನ್ನು (ರೂಪಾಯಿ ಐವತ್ತು ಲಕ್ಷಗಳು ಮಾತ್ರ) ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ, ಬಾಗಲಕೋಟೆ ಇವರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು ಅವರಿಗೆ ಮಂಜೂರಾತಿ ನೀಡಲಾಗಿದೆ.

1) ಈ ಯೋಜನೆಗೆ ಆಯುಕ್ತರು, ಕೂಡಲ ಸಂಗಮ ಅಭಿವೃದ್ಧಿ ಮಂಡಳಿ ಇವರು ಸರ್ಕಾರಕ್ಕೆ ವಿವರವಾದ ಪ್ರಸ್ತಾವನೆಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರ ಮೂಲಕ ಕಳುಹಿಸಿ ಸರ್ಕಾರವು ಆ ಪ್ರಸ್ತಾವನೆಗೆ ಅನುಮೋದನೆ ನೀಡಿದ ನಂತರವೇ ಸಂರಕ್ಷಣಾ ಕಾಮಗಾರಿಯನ್ನು ಕೈಗೆತ್ತಿಕೊಳ್ಳತಕ್ಕದ್ದು.
2) ಸರ್ಕಾರವು ಮಂಜೂರು ಮಾಡಿರುವ ಮೊತ್ತವನ್ನು ಉದ್ದೇಶಿತ ಯೋಜನೆಯ ಅನುಷ್ಠಾನಕ್ಕೆ ಮಾತ್ರ ಉಪಯೋಗಿಸತಕ್ಕದ್ದು.
3) ಅಭಿವೃದ್ಧಿ ಕಾಮಗಾರಿ ಕಾರ್ಯಪ್ರಗತಿಯ ಬಗ್ಗೆ ಆಗಿಂದಾಗ್ಗೆ ಇಲಾಖೆಗೆ ವರದಿ ಸಲ್ಲಿಸುವುದು.
4) ಯೋಜನೆಯ ಅನುಷ್ಠಾನ ಪೂರ್ಣಗೊಂಡ ಮೇಲೆ ಲೋಕೋಪಯೋಗಿ ಇಲಾಖೆಯಿಂದ ಮೌಲ್ಯಮಾಪನ ಪ್ರಮಾಣ ಪತ್ರ ಪಡೆದು ಸಲ್ಲಿಸುವುದು.
5) ಸರ್ಕಾರ ನೀಡಿದ ಅನುದಾನ ಸಂಪೂರ್ಣ ಬಳಕೆಯಾದ ಬಗ್ಗೆ ದೃಢೀಕರಣ ಪ್ರಮಾಣ ಪತ್ರವನ್ನು ಒದಗಿಸುವುದು.
6) ಅಭಿವೃದ್ಧಿ ಕಾಮಗಾರಿಯನ್ನು ಅತ್ಯಂತ ತ್ವರಿತವಾಗಿ ಪೂರ್ಣಗೊಳಿಸುವುದು.

ಈ ಸಂಬಂಧವಾಗಿ ತಗಲುವ ವೆಚ್ಚವನ್ನು 2007–08ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–1–77–015 (ಯೋಜನೆ) ಇದರಲ್ಲಿ ಭರಿಸತಕ್ಕದ್ದು.

ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ ಆಇ 1307/ವೆಚ್ಚ–5/2007, ದಿನಾಂಕ 12–9–2007ರಲ್ಲಿ ಪಡೆದು ಹಾಗೂ ಇಲಾಖೆಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 565

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಸಹಕಾರ ಸಚಿವಾಲಯ**

**ವಿಷಯ :** ಶ್ರೀ ಗೋಕರ್ಣನಾಥ ಕೋ ಆಪರೇಟೀವ್ ಬ್ಯಾಂಕ್ ನಿಯಮಿತ, ಮಂಗಳೂರು ಇದು ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ಲೆಕ್ಕ ಪರಿಸೊಧನಾ ಶುಲ್ಕ ರೂ. 4,59,155–00/–ಗಳನ್ನು ಮರುಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:**
1. ಸಹಕಾರ ಸಂಘಗಳ ಲೆಕ್ಕಪರಿಶೋಧನಾ ನಿರ್ದೇಶಕರ ಪತ್ರದ ಸಂಖ್ಯೆ: ಎಡಿಎಫ್/ಎಡಿಸಿ/2006–07, ದಿನಾಂಕ 5–10–2006.
2. ಸರ್ಕಾರದ ಆದೇಶದ ಸಂಖ್ಯೆ: ಸಿಒ 161 ಸಿಎಲ್ಎಂ 2006, ಬೆಂಗಳೂರು ದಿನಾಂಕ 12–7–2007.
3. ಪ್ರಧಾನ ವ್ಯವಸ್ಥಾಪಕರು, ಶ್ರೀ ಗೋಕರ್ಣನಾಥ ಕೋ–ಆಪರೇಟೀವ್ ಬ್ಯಾಂಕ್ ಲಿ., ಮಂಗಳೂರು ರವರ ದಿನಾಂಕ 2–8–2007ರ ಮನವಿ.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಶ್ರೀ ಗೋಕರ್ಣನಾಥ ಸಹಕಾರ ಬ್ಯಾಂಕ್ ನಿಯಮಿತ, ಮಂಗಳೂರು ಇದು 2003–04ನೇ ಸಾಲಿಗೆ 7,72,651/– ರೂಗಳ ಲೆಕ್ಕಪರಿಶೋಧನಾ ಶುಲ್ಕವನ್ನು ಸರ್ಕಾರಕ್ಕೆ ಪಾವತಿಸಿದ್ದು 2003–04 ಮತ್ತು 2004–05ನೇ ಸಾಲುಗಳ ಲೆಕ್ಕಪರಿಶೋಧನಾ ಶುಲ್ಕ ರೂ. 2,08,884ಗಳನ್ನು ವಜಾ ಮಾಡಲಾಗಿ ರೂ. 5,63,767/–ಗಳನ್ನು ಸರ್ಕಾರಕ್ಕೆ ಹೆಚ್ಚುವರಿ ಪಾವತಿಸಿದ್ದು 2005–06ನೇ ಸಾಲಿನಿಂದ ಸದರಿ ಬ್ಯಾಂಕಿನ ಲೆಕ್ಕಪರಿಶೋಧನೆಯನ್ನು ಚಾರ್ಡರ್ಡ್ ಅಕೌಂಟೆಂಟರವರಿಂದ ಮಾಡಿಸುತ್ತಿರುವುದರಿಂದ ಹೆಚ್ಚಿಗೆ ಪಾವತಿಸಲ್ಪಟ್ಟ ಲೆಕ್ಕಪರಿಶೋಧನಾ ಶುಲ್ಕ ರೂ. 5,63,767/–ಗಳನ್ನು ಮುಂದಿನ ಸಾಲುಗಳಲ್ಲಿ ಹೊಂದಾಣಿಕೆ ಮಾಡಿಕೊಳ್ಳುವ ಸಾಧ್ಯತೆ ಇಲ್ಲದಿರುವ ಪ್ರಯುಕ್ತ ಸದರಿ ಮೊತ್ತವನ್ನು ಬ್ಯಾಂಕಿಗೆ ವಾಪಸ್ ನೀಡಲು ಮಂಜೂರಾತಿ ನೀಡಬೇಕೆಂದು ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಸದರಿ ಬ್ಯಾಂಕು ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ಲೆಕ್ಕಪರಿಶೋಧನಾ ಶುಲ್ಕ ರೂ. 1,04,612–00ಗಳನ್ನು ಮರುಪಾವತಿಸಲು ಮಂಜೂರಾತಿ ನೀಡಲಾಗಿದೆ.

ಮೇಲೆ ಓದಲಾದ (3)ರ ಮನವಿಯಲ್ಲಿ ಸರ್ಕಾರಿ ಆದೇಶದ ಸಂಖ್ಯೆ: ಸಿಒ 161 ಸಿಎಲ್ಎಂ 2006 ದಿನಾಂಕ 2–8–2007ರನ್ವಯ ರೂ. 1,04,612–00ಗಳನ್ನು ಸದರಿ ಬ್ಯಾಂಕಿಗೆ ಮರುಪಾವತಿಸಲು ಮಂಜೂರಾತಿ ನೀಡಲಾಗಿದ್ದು ಇನ್ನೂ ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ಲೆಕ್ಕಪರಿಶೋಧಾನ ಶುಲ್ಕ ರೂ. 4,59,155–00ಗಳು ಬಾಕಿ ಇದ್ದು ಈ ಮೊತ್ತವು ಬ್ಯಾಂಕಿನ ಠೇವಣಿದಾರರ ಹಣವಾಗಿರುವುದರಿಂದ ಸರ್ಕಾರಕ್ಕೆ ಹೆಚ್ಚಿಗೆ ಪಾವತಿಸಿರುವ ಲೆಕ್ಕಪರಿಶೋಧನಾ ಶುಲ್ಕದ ಒಟ್ಟು ಮೊತ್ತ ರೂ. 5,63,767–00ಗಳನ್ನು ಒಂದೇ ಕಂತಿನಲ್ಲಿ ಮರುಪಾವತಿಸಲು ಸದರಿ ಬ್ಯಾಂಕು ಕೋರಿರುತ್ತದೆ.

ಸದರಿ ಪ್ರಸ್ತಾವೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 161 ಸಿಎಲ್ಎಂ 2006, ಬೆಂಗಳೂರು, ದಿನಾಂಕ: 27ನೇ ಫೆಬ್ರವರಿ 2008.**

ಮೇಲೆ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶ್ರೀ ಗೋಕರ್ಣನಾಥ ಸಹಕಾರ ಬ್ಯಾಂಕ್ ನಿಯಮಿತ., ಮಂಗಳೂರು ಇದು ಸರ್ಕಾರಕ್ಕೆ ಹೆಚ್ಚಿಗೆ ಪಾತಿಸಿರುವ ಲೆಕ್ಕಪರಿಶೋಧನಾ ಶುಲ್ಕ ರೂ. 4,59,155–00ಗಳನ್ನು (ನಾಲ್ಕು ಲಕ್ಷದ ಐವತ್ತೊಂಬತ್ತು ಸಾವಿರದ ನೂರೈವತ್ತೈದು ರೂಗಳು ಮಾತ್ರ) ಸದರಿ ಬ್ಯಾಂಕಿಗೆ ಮರುಪಾವತಿಸಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2007–08ನೇ ಸಾಲಿನಲ್ಲಿ ಒದಗಿಸಿರುವ ಲೆಕ್ಕಶೀರ್ಷಿಕೆ "0425–00–900–0–00 ವಜಾ ವಾಪಸಾತಿ" ಅಡಿಯಲ್ಲಿ ಭರಿಸತಕ್ಕದ್ದು.

ಈ ಮೊತ್ತವನ್ನು ಸಹಕಾರ ಲೆಕ್ಕ ಪರಿಶೋಧನಾ ಜಂಟಿ ನಿಬಂಧಕರು (ಆಡಿಟ್–2) ಸಹಕಾರ ಲೆಕ್ಕಪರಿಶೋಧನಾ ನಿರ್ದೇಶಕರ ಕಛೇರಿ ಬೆಂಗಳೂರು ಇವರು ಹಣ ಸಂದಾಯ ರಸೀತಿಯ ಮೂಲಕ ಸಹಕಾರ ಸಂಘಗಳ ಲೆಕ್ಕ ಪರಿಶೋಧನಾ ನಿರ್ದೇಶಕರು ಬೆಂಗಳೂರು ಇವರ ಮೇಲು ಸಹಿ ಪಡೆದು ಖಜಾನೆಯಿಂದ ಡ್ರಾ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಎಫ್‌ಡಿ 24 ವೆಚ್ಚ–2/2008, ದಿನಾಂಕ 5–2–2008ರಲ್ಲಿ ನೀಡಿರುವ ಒಪ್ಪಿಗೆ ಹಾಗೂ ಸರ್ಕಾರಿ ಆದೇಶದ ಸಂಖ್ಯೆ: ಎಫ್‌ಡಿ–1/ಟಿಎಫ್‌ಪಿ/2001 ದಿನಾಂಕ 2–2–2001ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಮೇರೆಗೆ ಹೊರಡಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 427

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಧಾರವಾಡದಲ್ಲಿ ಆಲೂರು ವೆಂಕಟರಾಯರ ಕಂಚಿನ ಮುತ್ಥಳಿ ಪ್ರದರ್ಶನಾಂಗಣ ಹಾಗೂ ವಾಚನಾಲಯ ನಿರ್ಮಾಣಕ್ಕಾಗಿ ಮತ್ತು ಗದಗ ಜಿಲ್ಲೆಯ ರೋಣಾ ತಾಲ್ಲೂಕು, ಹೊಳೆ ಆಲೂರಿನಲ್ಲಿ ಆಲೂರು ವೆಂಕಟರಾಯರ ಸ್ಮಾರಕ ಭವನದ ನಿರ್ಮಾಣಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 137 ಕಸನಿ 2007, ದಿ: 26–7–2007.
2. ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 25 ಸ್ಮಾಪ್ರನಿ 2007, ದಿ: 13–9–2007.
3. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ 8 ಸ್ಮಾರಕ 2007–08 ದಿನಾಂಕ 1–3–2008 ಹಾಗೂ 3–3–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 26–7–2007ರ ಸರ್ಕಾರಿ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2007–08ನೇ ಸಾಲಿನ ಹೊಸಯೋಜನೆ–ಹೊಳೆ ಆಲೂರು ಅಭಿವೃದ್ಧಿ ಮತ್ತು ಆಲೂರು ವೆಂಕಟರಾಯರ ಸ್ಮಾರಕ ನಿರ್ಮಾಣಕ್ಕೆ ತಾತ್ವಿಕ ಅನುಮೋದನೆ ನೀಡಲಾಯಿತು. ಮೇಲೆ (2)ರಲ್ಲಿ ಓದಲಾದ ದಿನಾಂಕ 13–9–2007ರ ಸರ್ಕಾರಿ ಆದೇಶದಲ್ಲಿ ಧಾರವಾಡದಲ್ಲಿ ಆಲೂರು ವೆಂಕಟರಾಯರ ಕಂಚಿನ ಮುತ್ಥಳಿ ಪ್ರದರ್ಶನಾಂಗಣ ಹಾಗೂ ವಾಚನಾಲಯ ನಿರ್ಮಾಣಕ್ಕಾಗಿ ಒಟ್ಟು ರೂ. 95.00 ಲಕ್ಷಗಳ ಅನುದಾನದಲ್ಲಿ ರೂ. 31.50 ಲಕ್ಷಗಳನ್ನು ಭಾಗಾಂಶವಾಗಿ ಧಾರವಾಡ ಜಿಲ್ಲೆಯ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ. ಮುಂದುವರಿದು ಧಾರವಾಡದಲ್ಲಿ ಆಲೂರು ವೆಂಕಟರಾಯರ ಕಂಚಿನ ಮುತ್ಥಳಿ ಪ್ರದರ್ಶನಾಂಗಣ ಹಾಗೂ ವಾಚನಾಲಯ ನಿರ್ಮಾಣಕ್ಕಾಗಿ ಉಳಿಕೆಯಾಗಿರುವ ರೂ. 63.50 ಲಕ್ಷಗಳನ್ನು ಮತ್ತು ಗದಗ ಜಿಲ್ಲೆ ರೋಣಾ ತಾಲ್ಲೂಕು ಹೊಳೆ ಆಲೂರಿನಲ್ಲಿ ಆಲೂರು ವೆಂಕಟರಾಯರ ಸ್ಮಾರಕ ನಿರ್ಮಾಣಕ್ಕಾಗಿ ರೂ. 25.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ ಅವರಿಗೆ ಮಂಜೂರು ಮಾಡುವಂತೆ ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ನಿರ್ದೇಶಕರು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಕಸಂವಾಪ್ರ 25 ಸ್ಮಾಪ್ರನಿ 2007, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2008.**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2007–08ನೇ ಸಾಲಿನ ಹೊಸ ಯೋಜನೆಗಳಲ್ಲಿ ಧಾರವಾಡದಲ್ಲಿ ಆಲೂರು ವೆಂಕಟರಾಯರ ಕಂಚಿನ ಮುತ್ಥಲಿ ಪ್ರದರ್ಶನಾಂಗಣ ಹಾಗೂ ವಾಚನಾಲಯ ನಿರ್ಮಾಣಕ್ಕಾಗಿ ನಿಗದಿಪಡಿಸಿದ ರೂ. 95.00 ಲಕ್ಷಗಳ ಪೈಕಿ ಉಳಿದ ರೂ. 63.50 ಲಕ್ಷಗಳನ್ನು (ರೂಪಾಯಿ ಅರವತ್ಮೂರು ಲಕ್ಷದ ಐವತ್ತು ಸಾವಿರಗಳು ಮಾತ್ರ) ಜಿಲ್ಲಾಧಿಕಾರಿಗಳು, ಧಾರವಾಡ ಜಿಲ್ಲೆ ಇವರಿಗೂ ಮತ್ತು ಗದಗ ಜಿಲ್ಲೆಯಲ್ಲಿನ ರೋಣಾ ತಾಲ್ಲೂಕಿನಲ್ಲಿರುವ ಹೊಳೆ ಆಲೂರಿನಲ್ಲಿ ಆಲೂರು ವೆಂಕಟರಾಯರ ಸ್ಮಾರಕದ ನಿರ್ಮಾಣಕ್ಕಾಗಿ ರೂ. 25.00 ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ಜಿಲ್ಲಾಧಿಕಾರಿಗಳು, ಗದಗ ಜಿಲ್ಲೆ ಅವರಿಗೂ ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ಅನುದಾನ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಮಂಜೂರಾತಿ ನೀಡಲಾಗಿದೆ.

1) ಸರ್ಕಾರವು ಮಂಜೂರು ಮಾಡಿರುವ ಮೊತ್ತವನ್ನು ಉದ್ದೇಶಿತ ಯೋಜನೆಯ ಅನುಷ್ಠಾನಕ್ಕೆ ಮಾತ್ರ ಉಪಯೋಗಿಸತಕ್ಕದ್ದು.
2) ಅಭಿವೃದ್ಧಿ ಕಾಮಗಾರಿ ಕಾರ್ಯಪ್ರಗತಿಯ ಬಗ್ಗೆ ಆಗಿಂದಾಗ್ಗೆ ಇಲಾಖೆಗೆ ವರದಿ ಸಲ್ಲಿಸುವುದು.
3) ಯೋಜನೆಯ ಅನುಷ್ಠಾನ ಪೂರ್ಣಗೊಂಡ ಮೇಲೆ ಲೋಕೋಪಯೋಗಿ ಇಲಾಖೆಯಿಂದ ಮೌಲ್ಯಮಾಪನ ಪ್ರಮಾಣ ಪತ್ರ ಪಡೆದು ಸಲ್ಲಿಸುವುದು.
4) ಸರ್ಕಾರ ನೀಡಿದ ಅನುದಾನ ಸಂಪೂರ್ಣ ಬಳಕೆಯಾದ ಬಗ್ಗೆ ದೃಢೀಕರಣ ಪ್ರಮಾಣಪತ್ರವನ್ನು ಒದಗಿಸುವುದು.
5) ಅಭಿವೃದ್ಧಿ ಕಾಮಗಾರಿಯನ್ನು ಅತ್ಯಂತ ತ್ವರಿತವಾಗಿ ಪೂರ್ಣಗೊಳಿಸುವುದು.

ಈ ಸಂಬಂಧ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–4–25–015 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರೊಂದಿಗೆ ಸಮಾಲೋಚಿಸಿ ಇಲಾಖೆಗೆ ಪ್ರತ್ಯಾಯೋಜಿಸಿದ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 525

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ವಿಷಯ :** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಅಧೀನ ಕಛೇರಿಗಳಿಗೆ ಕಂಪ್ಯೂಟರ್ ಮತ್ತು ಕಂಪ್ಯೂಟರ್ ಪೀಠೋಪಕರಣಳನ್ನು ಖರೀದಿಸುವ ಬಗ್ಗೆ.

**ಓದಲಾಗಿದೆ:**
1. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವರ ಪತ್ರ ಸಂಖ್ಯೆ: ಕಸನಿ 46 ಕಅ 2007–08 ದಿನಾಂಕ 18–8–2007, 21–9–2007, 8–10–2007 ಮತ್ತು 13–3–2008.
2. ಸರ್ಕಾರದ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಇ–ಆಡಳಿತ) ಇವರ ಅಧ್ಯಕ್ಷತೆಯಲ್ಲಿ ದಿನಾಂಕ 13–3–2008ರಂದು ನಡೆದ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನ.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರು ಜಿಲ್ಲಾ ಅಧೀನ ಕಛೇರಿಗಳಿಗೆ ಕಂಪ್ಯೂಟರ್ ಯಂತ್ರ, ಪ್ರಿಂಟರ್ ಇವುಗಳನ್ನು ಖರೀದಿಸಲು ಜಿಲ್ಲೆಗೆ ತಲಾ ರೂ. 50,000/–ಗಳಂತೆ ಹಣವನ್ನು ಬಿಡುಗಡೆ ಮಾಡಬೇಕೆಂದು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ. ಎಲ್ಲಾ ಅಧೀನ ಕಛೇರಿಗಳಿಗೆ ಕಂಪ್ಯೂಟರ್ ಮತ್ತು ಕಂಪ್ಯೂಟರ್ ಪೀಠೋಪಕರಣಗಳನ್ನು ಒದಗಿಸಲು ಒಟ್ಟು ರೂ. 13.50 ಲಕ್ಷಗಳ ಅವಶ್ಯಕತೆ ಇರುತ್ತದೆಂದು ಅದಕ್ಕೆ ಪರಿಶೀಲನಾ ಪಟ್ಟಿ ಮತ್ತು ಪ್ರಸ್ತಾವನೆಯನ್ನು ಕಳುಹಿಸಿ ಕೂಡಲೇ ಮಂಜೂರಾತಿಯನ್ನು ನೀಡಬೇಕೆಂದು ಕೋರಿರುತ್ತಾರೆ. ಪ್ರಸ್ತುತ ಆಯವ್ಯಯದಲ್ಲಿ ಒದಗಿಸಲಾದ ರೂ. 13.50 ಲಕ್ಷಗಳ ಅನುದಾನವನ್ನು ಬಳಸಿಕೊಂಡು ಕಂಪ್ಯೂಟರ್ ಪೀಠೋಪಕರಣಗಳನ್ನು ಖರೀದಿಸಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಸಮ್ಮುಖದಲ್ಲಿ ಇರುವ ಅಧಿಕಾರಯುತ ಸಮಿತಿಯ ಮುಂದೆ ಮಂಡಿಸಿ ಪೂರ್ಣ ಪ್ರಮಾಣದ ಮೊತ್ತವನ್ನು ಮಂಜೂರು ಮಾಡಿಸಿಕೊಂಡು ಖರೀದಿಸಲು ತಡವಾಗುತ್ತದೆಂದು ಭಾವಿಸಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಈ ವೆಚ್ಚವನ್ನು ಪ್ರಸಕ್ತ ಸಾಲಿನಲ್ಲಿ ರೂ. 10.00 ಲಕ್ಷಕ್ಕೆ ನಿಗದಿಪಡಿಸಿ ಖರೀದಿಸಲು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ. ಈ ಬಗ್ಗೆ ದಿನಾಂಕ 13–3–2008ರಂದು ಇ–ಆಡಳಿತ ಇಲಾಖೆಯ ಕಾರ್ಯದರ್ಶಿಗಳ ಸಮ್ಮುಖದಲ್ಲಿ ಸಭೆ ನಡೆದು ಇಲಾಖೆಯು ಕೋರಿರುವ ರೂ. 10.00 ಲಕ್ಷಗಳನ್ನು ಪ್ರಸಕ್ತ ಸಾಲಿನ ಅನುದಾನದಲ್ಲಿ ಬಳಸಿಕೊಂಡು 20 ಜಿಲ್ಲೆಗಳಿಗೆ ಕಂಪ್ಯೂಟರ್, ಪ್ರಿಂಟರ್, ಯು.ಪಿ.ಎಸ್. ಸಾಫ್ಟ್‌ವೇರ್ ಮತ್ತು ಕಂಪ್ಯೂಟರ್ ಪೀಠೋಪಕರಣಗಳನ್ನು ಖರೀದಿಸಲು ಒಪ್ಪಿಗೆ ನೀಡಲಾಗಿರುತ್ತದೆ. ಪ್ರಸ್ತುತ ಚಾಲ್ತಿಯಲ್ಲಿರುವ ನಿಯಮಗಳನ್ವಯ ಕಂಪ್ಯೂಟರ್ ಖರೀದಿಸಲು ತಾಂತ್ರಿಕ ಸಲಹಾ ಸಮಿತಿಯ ಅನುಮತಿಯನ್ನು ಪಡೆಯಬೇಕಾಗುತ್ತದೆ. ಈಗ ಸಮಯಾವಕಾಶ ಕಡಿಮೆ ಇರುವ ಹಿನ್ನೆಲೆಯಲ್ಲಿ ಈ ತಾಂತ್ರಿಕ ಸಲಹಾ ಸಮಿತಿಯ ಸಹಮತಿಯನ್ನು ನಿರೀಕ್ಷಿಸಿ ಕೂಡಲೇ ರೂ. 10.00 ಲಕ್ಷಗಳ ಅನುದಾನವನ್ನು ಲೆಕ್ಕಶೀರ್ಷಿಕೆ 2205–00–001–0–01–059 (ಯೋಜನೆ) ಇದರಡಿಯಲ್ಲಿ ಬಿಡುಗಡೆ ಮಾಡಲು ತೀರ್ಮಾನಿಸಲಾಗಿರುತ್ತದೆ. ಅದರಂತೆ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಕಸಂವಾಪ್ರ 194 ಕಸನಿ 2007, ಬೆಂಗಳೂರು, ದಿನಾಂಕ: 19ನೇ ಮಾರ್ಚ್ 2008.**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 20 ಜಿಲ್ಲೆಗಳ ಅಧೀನ ಕಛೇರಿಗಳಿಗೆ ಕಂಪ್ಯೂಟರ್ ಮತ್ತು ಅದಕ್ಕೆ ಸಂಬಂಧಪಟ್ಟ ಪ್ರಿಂಟರ್, ಯು.ಪಿ.ಎಸ್. ಸಾಫ್ಟ್‌ವೇರ್ ಮತ್ತು ಕಂಪ್ಯೂಟರ್ ಪೀಠೋಪಕರಣಗಳನ್ನು ಖರೀದಿಸಲು ರೂ. 10.00 ಲಕ್ಷಗಳನ್ನು (ರೂಪಾಯಿ ಹತ್ತು ಲಕ್ಷಗಳು ಮಾತ್ರ) ತಾಂತ್ರಿಕ ಸಲಹಾ ಸಮಿತಿಯ ಸಹಮತಿಯನ್ನು ಪಡೆಯಬೇಕೆಂಬ ಷರತ್ತಿಗೆ ಒಳಪಟ್ಟು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205–00–001–0–01–059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರದ ಕಾರ್ಯದರ್ಶಿ, ಸಿ.ಆ.ಸು. ಇಲಾಖೆ (ಇ–ಆಡಳಿತ) ಇವರ ಅಧ್ಯಕ್ಷತೆಯಲ್ಲಿ ದಿನಾಂಕ 13–3–2008ರಂದು ನಡೆದ ಸಭೆಯ ತೀರ್ಮಾನದಂತೆ ಹಾಗೂ ಇಲಾಖೆಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 526

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ವಿಷಯ :** ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2007–08ನೇ ಸಾಲಿನ ಅನುದಾನ ಕೊನೆಯ ಎರಡು ಕಂತುಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 46 ಕೆಎಲ್ 2007, ದಿನಾಂಕ 23–10–2007.
2. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರ ಪತ್ರ ಸಂಖ್ಯೆ: ಕಅಪ್ರಾ/ಕಾ/47/2007–08, ದಿನಾಂಕ 21–1–2008.

**ಪ್ರಸ್ತಾವನೆ :**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2007–08ನೇ ಸಾಲಿನ ಯೋಜನೇತರ ಅನುದಾನದಲ್ಲಿ ನಿಗದಿಪಡಿಸಿದ ಒಟ್ಟು ರೂ. 46.67 ಲಕ್ಷಗಳ ಅನುದಾನದಲ್ಲಿ ಮೊದಲನೇ ಕಂತುಗಳ ಮೊತ್ತ ರೂ. 23.33 ಲಕ್ಷಗಳನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬಿಡುಗಡೆ ಮಾಡಲಾಗಿತ್ತು. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಅವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಎರಡನೇ ಕಂತಿನಲ್ಲಿ ಉಳಿದಿರುವ ರೂ. 23.34 ಲಕ್ಷಗಳನ್ನು ಬಿಡುಗಡೆ ಮಾಡಲು ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಆದೇಶ ಸಂಖ್ಯೆ: ಕಸಂವಾಪ್ರ 46 ಕೆಒಎಲ್ 2007, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2008.**

ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ 2007–08ನೇ ಸಾಲಿನ ಕೊನೆಯ ಕಂತು ರೂ. 23.34 ಲಕ್ಷಗಳನ್ನು (ರೂಪಾಯಿ ಇಪ್ಪತ್ಮೂರು ಲಕ್ಷದ ಮೂವತ್ನಾಲ್ಕು ಸಾವಿರಗಳು ಮಾತ್ರ) ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಇವರಿಗೆ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು 2007–08ನೇ ಸಾಲಿನ ಯೋಜನೇತರ ಆಯವ್ಯಯ ಲೆಕ್ಕಶೀರ್ಷಿಕೆ 2052–00–092–0–09–101 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರೊಂದಿಗೆ ಸಮಾಲೋಚಿಸಿ ಇಲಾಖೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 527

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ವಿಷಯ :** ರಾಮನಗರ ಮತ್ತು ಚಿಕ್ಕಬಳ್ಳಾಪುರ ಹೊಸ ಜಿಲ್ಲೆಗಳಲ್ಲಿ ಅಸ್ತಿತ್ವಕ್ಕೆ ಬಂದಿರುವ ಜಿಲ್ಲಾ ಪಂಚಾಯತಿಗಳಿಗೆ ನಿಧಿ ಸ್ಥಾಪನೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಆರ್‌ಡಿ 27 ಭೂದಾಪು 2006(ಭಾಗ–3) ದಿನಾಂಕ 3–8–2007.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 169 ಜಿಪಸ 2007, ದಿನಾಂಕ 21–8–2007.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಗ್ರಾಅಪ 170 ಜಿಪಸ 2007, ದಿನಾಂಕ 21–8–2007.

**ಪ್ರಸ್ತಾವನೆ :**

ಸರ್ಕಾರವು ರಾಜ್ಯದಲ್ಲಿ ರಾಮನಗರ ಮತ್ತು ಚಿಕ್ಕಬಳ್ಳಾಪುರ ಎಂಬ ಎರಡು ಹೊಸ ಜಿಲ್ಲೆಗಳನ್ನು ರಚಿಸಿದ್ದು, ಪ್ರತಿ ಜಿಲ್ಲೆಗಳಿಗೆ ಜಿಲ್ಲಾ ಪಂಚಾಯತಿಗಳನ್ನು ರಚಿಸಲಾಗಿದೆ. ಜಿಲ್ಲಾ ಪಂಚಾಯತಿಗಳ ಕಾರ್ಯ ನಿರ್ವಹಣೆಗೆ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಸೆಕ್ಷನ್ 225ರ ಮೇರೆಗೆ ಪ್ರತಿಯೊಂದು ಜಿಲ್ಲಾ ಪಂಚಾಯತ್‌ನಲ್ಲಿ ಆರ್ಥಿಕ ವಹಿವಾಟುಗಳ ನಿರ್ವಹಣೆಗಾಗಿ ಜಿಲ್ಲಾ ಪಂಚಾಯತ್ ನಿಧಿಯನ್ನು ಸ್ಥಾಪಿಸಬೇಕಾಗಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 12 ಎಎಫ್‌ಎನ್ 2007, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2008.**

ಹೊಸದಾಗಿ ಅಸ್ತಿತ್ವಕ್ಕೆ ಬಂದಿರುವ ರಾಮನಗರ ಮತ್ತು ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತಿಗಳಲ್ಲಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ 1993ರ ಸೆಕ್ಷನ್ 225ರ ಮೇರೆಗೆ ಲೆಕ್ಕಶೀರ್ಷಿಕೆ "8448–ಸ್ಥಳೀಯ ನಿಧಿ ಠೇವಣಿಗಳು–109–ಪಂಚಾಯತ್ ಸಂಸ್ಥೆಗಳ ನಿಧಿ–ರಾಮನಗರ/ಚಿಕ್ಕಬಳ್ಳಾಪುರ ಜಿಲ್ಲಾ ಪಂಚಾಯತ್ ನಿಧಿ"ಯನ್ನು ದಿನಾಂಕ 1–4–2008 ರಿಂದ ಸ್ಥಾಪಿಸಲು ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್‌ಡಿ 1351 ವೆಚ್ಚ–6 2007, ದಿನಾಂಕ 7–12–2007ರಲ್ಲಿ ನೀಡಲಾದ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 524

**ಎ.ಎಸ್. ಶಿವಾನಂದಾಚಾರ್ಯ**

ಆಂತರಿಕ ಆರ್ಥಿಕ ಸಲಹೆಗಾರರು ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

**HEALTH AND FAMILY WELFARE SECRETARIAT**

**Sub :** NABARD RIDF works – reg.

**Read :** Govt. Letter No. AaKuKa/666/CGM/2007, dated 26-9-2007.

**Preamble:**

In the Letter read above the Government has communicated that suitable arrangements be made for countersigning the bills relating to RIDF building construction works funded by NABARD, by the Deputy Secretary, KHSDRP, for claifming re-imbursement.

In has been considered to make the Karnataka Health System Development and Reform Project Engineering Wing as the nodal cell to monitor, inspect and certify expenditure for RIDF works, henceforth.

However, for all works prior to this Government Order, the Deputy Secretary, Department of Health and Family Welfare shall countersign the bills relating to RIDF building construction works.

Hence the following order.

**Government Order No. HFW 105 CGM 2008, Bangalore, Dated 24th March 2008**

Under the circumstances mentioned in the pramble, Government are pleased to designate the Karnataka Health System Development and Reform Project Engineering Wing as the nodal cell to Monitor, inspet and certify expenditure for RIDF works with immediate effect.

The Deputy Secretary, KHSDRP is hereby authorised to countersign all bills pertaining to RIDF building construction works funded by NABARD. All bills shall be accompained by filed inspection reports, inspection reports at various stages of work, preferably with photographs with the concerned officers and certified by them.

By order and in the name of the President of India,

PR. 528

**M.S. SWAMY**

Deputy Secretary to Government,

Health and Family Welfare Department.

**ಶಿಕ್ಷಣ ಸಚಿವಾಲಯ**

**ವಿಷಯ :** ಶ್ರೀ ಜಿ.ಕೆ. ಪಾಟೀಲ್, ಮುಖ್ಯ ಶಿಕ್ಷಕರು (ನಿವೃತ್ತ) ಸರ್ಕಾರಿ ಪ್ರೌಢ ಶಾಲೆ, ಯಡಹಳ್ಳಿ ಇಂಗಳಗಿ, ಮುಧೋಳ ತಾ: ಬಾಗಲಕೋಟೆ ಜಿಲ್ಲೆ, ಇವರಿಗೆ ಕಾಲಮಿತಿ ಮುಂಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಇಡಿ 321 ಡಿಎಆರ್ 1990, ದಿನಾಂಕ 22–10–1993.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಅ.ಸ. ಪತ್ರ ಸಂಖ್ಯೆ: ಸಿ1(6) ಈ.ವ–34/2002–03, ದಿನಾಂಕ 17–4–2007.

**ಪ್ರಸ್ತಾವನೆ :**

ಶ್ರೀ ಜೆ.ಕೆ. ಪಾಟೀಲ್, ಮುಖ್ಯ ಶಿಕ್ಷಕರು (ನಿವೃತ್ತ) ಸರ್ಕಾರಿ ಪ್ರೌಢ ಶಾಲೆ, ಯಡಹಳ್ಳಿ ಇಂಗಳಗಿ, ಮುಧೋಳ ತಾ: ಬಾಗಲಕೋಟೆ ಜಿಲ್ಲೆ, ಇವರಿಗೆ ಮೇಲೆ ಓದಲಾದ (1)ರನ್ವಯ ಇವರು ದಿನಾಂಕ 1–4–1971 ರಿಂದ 31–3–1983 ರವರೆಗೆ ಮುಖ್ಯ ಶಿಕ್ಷಕರ ಹುದ್ದೆಯಲ್ಲಿ 12 ವರ್ಷಗಳ ತೃಪ್ತಿಕರ ಸೇವೆ ಸಲ್ಲಿಸಿದ್ದರಿಂದ ದಿನಾಂಕ 1–4–1983 ರಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ. 1050–1950 ರಿಂದ ಆಯ್ಕೆ ವೇತನ ಶ್ರೇಣಿ ರೂ. 1100–2025ಗೆ ನಿಗದಿಗೊಳಿಸಿ ಆದೇಶ ಹೊರಡಿಸಲಾಗಿತ್ತು.

ಮೇಲೆ ಓದಲಾದ (2)ರಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲಿಸಿ, ಶ್ರೀ ಜೆ.ಕೆ. ಪಾಟೀಲ್, ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 188 ಡಿಪಿಐ 1981, ದಿನಾಂಕ 22–3–1982ರಲ್ಲಿ ಎರಡನೇ ದರ್ಜೆಯಲ್ಲಿ ಅಂತಿಮ ಅರ್ಹತಾ ದಿನಾಂಕವನ್ನು 12–9–1969 ಎಂದು ನಮೂದಿಸಿರುವುದರಿಂದ ಅದರಂತೆ ಕಾಲಮಿತಿ ವೇತನ ಬಡ್ತಿಯನ್ನು ದಿನಾಂಕ 1–4–1983ಕ್ಕೆ ಬದಲಾಗಿ ದಿನಾಂಕ 1–4–1982 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡುವಂತೆ ಕೋರಿ ಪ್ರಸ್ತಾಪಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 236 ಡಿಪಿಐ 2007, ಬೆಂಗಳೂರು, ದಿನಾಂಕ: 25ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ, ಸಾರ್ವಜನಿಕ ಶಿಕ್ಷಣ ಇಲಾಖೆಯಲ್ಲಿನ ಬೋಧಕ ವರ್ಗ 'ಬಿ' ದರ್ಜೆಯ ಅಧಿಕಾರಿಯಾಗಿದ್ದ, ಶ್ರೀ ಜೆ.ಕೆ. ಪಾಟೀಲ್, ನಿವೃತ್ತ ಮುಖ್ಯ ಶಿಕ್ಷಕರು, ಸರ್ಕಾರಿ ಪ್ರೌಢಶಾಲೆ, ಯಡಹಳ್ಳಿ ಇಂಗಳಗಿ, ಮುಧೋಳ ತಾ: ಬಾಗಲಕೋಟೆ ಜಿಲ್ಲೆ, ಇವರಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 188 ಡಿಪಿಐ 1981, ದಿನಾಂಕ

22–3–1982ರಲ್ಲಿ ಎರಡನೇ ದರ್ಜೆಯಲ್ಲಿ ಅಂತಿಮ ಅರ್ಹತಾ ದಿನಾಂಕವನ್ನು 12–9–1969 ಎಂದು ನಿಗದಿಪಡಿಸಿರುವುದರಿಂದ ಈಗಾಗಲೇ ಸದರಿಯವರಿಗೆ ದಿನಾಂಕ 1–4–1983 ರಿಂದ ಜಾರಿಗೆ ಬರುವಂತೆ ವೇತನ ಶ್ರೇಣಿ ರೂ. 1050–1950 ರಿಂದ ಆಯ್ಕೆ ವೇತನ ಶ್ರೇಣಿ ರೂ. 1100–2025 ರಲ್ಲಿ ಮಂಜೂರು ಮಾಡಲಾದ ಕಾಲಮಿತಿ ವೇತನ ಬಡ್ತಿಯನ್ನು ದಿನಾಂಕ 1–4–1983ರ ಬದಲಾಗಿ ದಿನಾಂಕ 1–4–1982 ರಿಂದ ಕಾಲಬದ್ಧ ಮುಂಬಡ್ತಿಯ ಸೌಲಭ್ಯವನ್ನು ಇತರೆ ಷರತ್ತುಗಳಿಗೆ ಒಳಪಟ್ಟು ಮಂಜೂರು ಮಾಡಿ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1180 ಸೇ–2/2007, ದಿನಾಂಕ 16–2–2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 534

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು–1,2)

**ಒಳಾಡಳಿತ ಸಚಿವಾಲಯ**

**ಸಂಖ್ಯೆ: ಹೆಚ್‌ಡಿ 27 ಪಿಒಪಿ 2008 (ಭಾ), ಬೆಂಗಳೂರು, ದಿನಾಂಕ 3ನೇ ಏಪ್ರಿಲ್ 2008.**

**ತಿದ್ದುಪಡಿ ಆದೇಶ**

ಬೆಂಗಳೂರು ಅಂತರರಾಷ್ಟ್ರೀಯ ವಿಮಾನ ನಿಲ್ದಾಣವು ದೇವನಹಳ್ಳಿಯಲ್ಲಿ ಕಾರ್ಯಾರಂಭವಾಗುವ ಕಾರಣ ಬೆಂಗಳೂರು ನಗರ ಪೊಲೀಸ್ ವ್ಯವಸ್ಥೆಯಲ್ಲಿ ಹೊಸ ಡೆಪ್ಯೂಟಿ ಕಮೀಷನರ್ ಆಫ್ ಪೊಲೀಸ್ (ಈಶಾನ್ಯ) ವಿಭಾಗ ಸೃಜನೆ ಹಾಗೂ ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಹೊಸ ಪೊಲೀಸ್ ಠಾಣೆ ಮತ್ತು ವೃತ್ತ ಕುರಿತು ಸೃಜನೆ ಮಾಡಿ ಹೊರಡಿಸಿದ ದಿನಾಂಕ 12–3–2008ರ ಆದೇಶ ಸಂಖ್ಯೆ: ಹೆಚ್‌ಡಿ 27 ಪಿಒಪಿ 2008ರ ಆದೇಶದ ಪ್ಯಾರ 2ರ ಕ್ರಮ ಸಂಖ್ಯೆ: 3ರಲ್ಲಿ "ಎಸಿಪಿ ಸಂಪಿಗೆಹಳ್ಳಿ ಬಡಾವಣೆ ಉಪವಿಭಾಗ" ಎಂಬುದರ ಬದಲಾಗಿ "ಎ.ಸಿ.ಪಿ. ಸಂಪಿಗೆಹಳ್ಳಿ ಉಪವಿಭಾಗ" ಎಂದು ಹಾಗೂ ಕ್ರಮ ಸಂಖ್ಯೆ: 4ರಲ್ಲಿ "ಎಸಿಪಿ ಅ.ರಾ.ವಿ.ನಿ. ಉಪ ವಿಭಾಗ" ಎಂಬುದರ ಬದಲಾಗಿ "ಎ.ಸಿ.ಪಿ. ದೇವನಹಳ್ಳಿ ಉಪವಿಭಾಗ" ಎಂದು ತಿದ್ದುಪಡಿ ಮಾಡಿ ಓದಿಕೊಳ್ಳತಕ್ಕದ್ದು ಹಾಗೂ ಸದರಿ ಆದೇಶದ ಪ್ಯಾರಾ (5)ರ ಎರಡನೇ ಸಾಲಿನಲ್ಲಿ ಖರೀದಿಸಲು ಪದಗಳ ನಂತರ "ಆವರ್ತಕ ವೆಚ್ಚ ರೂ. 13,05,228–00ಗಳಿಗೆ (ಹದಿಮೂರು ಲಕ್ಷ ಐದು ಸಾವಿರದ ಎರಡು ನೂರ ಇಪ್ಪತ್ತೆಂಟು ರೂಪಾಯಿಗಳು ಮಾತ್ರ)" ಎಂದು ಸೇರಿಸಿ ಓದಿಕೊಳ್ಳತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 598

**ಇನಾಯತ್ ಉಲ್ಲಾ ಖಾನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ವೆಚ್ಚ)

**FINANCE SECRETARIAT**

**No. FD 7 TFP 2007, Bangalore Dated 25th March 2008.**

**ADDENDUM**

**Sub :** Delegation of enhanced financial powers to the Director General and Inspector General of Police, Commissioner of Police other Heads of Department and District level officers of police Department – Regarding.

**Read :** Government Order No. FD 7 TFP 2007, dtd: 29-5-2007.

The following para may be read as second para in the order portion of Government Order No. FD 7 TFP 2007, dated 29-5-2007.

"The Director, FSL" may be deleted from column 10 –District level officers and read as "13-Director FSL" under column No.9 –other Heads of Department below "12-DIG-other units in annexure to Govt. order No. FD 937 FR 2003, dated 21-11-2003."

By order and in the name of the President of India,

PR. 607

**C. SHAMA RAO**

Under Secretary to Government, (FR & BCC)

Finance Department.

**ಕಂದಾಯ ಸಚಿವಾಲಯ**

**ವಿಷಯ :** ತಾಲ್ಲೂಕು ಪುನರ್ ರಚನಾ ಸಮಿತಿಗೆ ಕರಾರು ಆಧಾರದ ಮೇಲೆ ನಿವೃತ್ತ ಅಧಿಕಾರಿಗಳನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಕಂಇ 28 ಭೂದಾಪು 2007, ದಿ: 29–8–2007.
2. ಸರ್ಕಾರದ ಆದೇಶ ಸಂ. ಕಂಇ 28 ಭೂದಾಪು 2007, ದಿ: 5–10–2007.
3. ಸರ್ಕಾರದ ಆದೇಶ ಸಂ. ಕಂಇ 28 ಭೂದಾಪು 2007, ದಿ: 14–11–2007.
4. ಸರ್ಕಾರದ ಆದೇಶ ಸಂ. ಕಂಇ 63 ಭೂದಾಪು 2007 (ಭಾಗ–2), ದಿನಾಂಕ 21–1–2008.
5. ಸದಸ್ಯ ಕಾರ್ಯದರ್ಶಿ, ತಾಲ್ಲೂಕು ಪುನರ್ ರಚನಾ ಸಮಿತಿ ಇವರ ಪತ್ರ ಸಂಖ್ಯೆ. ತಾಪುಸ 1 ಆಡಳಿತ 2008, ದಿ: 4–2–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 29–8–2007ರಲ್ಲಿ ರಾಜ್ಯದಲ್ಲಿ ಹೊಸ ತಾಲ್ಲೂಕುಗಳ ಪುನರ್‌ರಚನೆ ಮಾಡುವ ಬಗ್ಗೆ ಅಧ್ಯಯನ ನಡೆಸಿ ವರದಿ ಸಲ್ಲಿಸಲು ಒಬ್ಬ ಅಧ್ಯಕ್ಷರು ಮತತು 4 ಜನ ಸದಸ್ಯರಿರುವ ತಾಲ್ಲೂಕು ಪುನರ್‌ರಚನಾ ಸಮಿತಿ ರಚಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 5–10–2007ರಲ್ಲಿ ಹೊಸ ತಾಲ್ಲೂಕುಗಳ ಪುನರ್ ರಚನಾ ಸಮಿತಿಗೆ ಈ ಕೆಳಕಂಡ ತಜ್ಞರನ್ನು ನೇಮಿಸಿ ಆದೇಶಿಸಲಾಗಿರುತ್ತದೆ.

| | | |
|---|---|---|
| 1 | ಶ್ರೀ ಎಂ.ಬಿ. ಪ್ರಕಾಶ್, ಐ.ಎ.ಎಸ್. (ನಿವೃತ್ತ) | ಅಧ್ಯಕ್ಷರು |
| 2 | ಶ್ರೀ ಚಿರಂಜೀವಿಸಿಂಗ್, ಐ.ಎ.ಎಸ್. (ನಿವೃತ್ತ) | ಸದಸ್ಯರು |
| 3 | ಶ್ರೀ ಕೃಷ್ಣಕುಮಾರ್, ಐ.ಎ.ಎಸ್. (ನಿವೃತ್ತ) | ಸದಸ್ಯರು |
| 4 | ಶ್ರೀ ಹೆಚ್.ಕೆ. ಶಿವಾನಂದ, ಐ.ಎ.ಎಸ್. (ನಿವೃತ್ತ) | ಸದಸ್ಯರು |
| 5 | ಶ್ರೀ ಹೆಚ್. ಶಶಿಧರ್, ಐ.ಎ.ಎಸ್. (ನಿವೃತ್ತ) | ಸದಸ್ಯ ಕಾರ್ಯದರ್ಶಿ |

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶ ದಿ: 14–11–2007ರಲ್ಲಿ ತಾಲ್ಲೂಕು ಪುನರ್ ರಚನಾ ಸಮಿತಿಯ ವೆಚ್ಚಕ್ಕಾಗಿ ಅಗತ್ಯವಿರುವ ರೂ. 50.00 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ.

ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶ ದಿ: 21–1–2008ರಲ್ಲಿ ತಾಲ್ಲೂಕು ಪುನರ್ ರಚನಾ ಸಮಿತಿಯ ಕಾರ್ಯ ನಿರ್ವಹಣೆಗಾಗಿ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಿ ಆದೇಶಿಸಲಾಗಿದೆ.

ಸದಸ್ಯ ಕಾರ್ಯದರ್ಶಿ, ತಾಲ್ಲೂಕು ಪುನರ್ ರಚನಾ ಸಮಿತಿರವರು ಮೇಲೆ ಓದಲಾದ (5)ರ ದಿನಾಂಕ 4–2–2008ರ ಪ್ರಸ್ತಾವನೆಯಲ್ಲಿ ಸಮಿತಿಯ ಕಾರ್ಯ ನಿರ್ವಹಣೆಯಲ್ಲಿ ಸೇವೆಯಲ್ಲಿರುವ ಪರಿಣಿತ ಅಧಿಕಾರಿಗಳ ಅಲಭ್ಯತೆ ಮನಗಂಡು ಸಮಿತಿಗೆ ಸಂಬಂಧಿತ ವಿಷಯದಲ್ಲಿ ಮತ್ತು ಆಡಳಿತ ಹಾಗೂ ಹಣಕಾಸಿನ ಕಾರ್ಯ ನಿರ್ವಹಣೆಯಲ್ಲಿ ಪರಿಣಿತಿ ಹೊಂದಿರುವ ಸರ್ಕಾರದಿಂದ ನಿವೃತ್ತಿ ಹೊಂದಿದ ಅಧಿಕಾರಿಗಳನ್ನು ಪ್ರಾರಂಭಿಕ ಕಾರ್ಯ ನಿರ್ವಹಣೆಯಲ್ಲಿ ಹಾಗೂ ಮಾಹಿತಿ ಸಂಗ್ರಹಣೆಯಲ್ಲಿ, ಸಂಚಿತ ವೇತನದ ಮತ್ತು ಕರಾರು ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳಲು ಸಮಿತಿಯ ಪತ್ರ ದಿನಾಂಕ 15–11–2007ರಲ್ಲಿ ಅನುಮೋದನೆ ನೀಡುವಂತೆ ಕೋರಲಾಗಿತ್ತು. ನಂತರ ಈ ಬಗ್ಗೆ ಸದಸ್ಯ ಕಾರ್ಯದರ್ಶಿಗಳು ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ ಇವರ ಜೊತೆ ಚರ್ಚಿಸಿ ನಿವೃತ್ತಿ ಅಧಿಕಾರಿಗಳು ಕಾರ್ಯನಿರ್ವಹಿಸಲು ಸೂಚಿಸಿರುವುದಾಗಿ ತಿಳಿಸಲಾಗಿತ್ತು. ಆದರೆ, ತಾಲ್ಲೂಕು ಪುನರ್ ರಚನಾ ಸಮಿತಿಗೆ ಕಾರ್ಯ ನಿರ್ವಹಣೆಗಾಗಿ ಸಿಬ್ಬಂದಿ ಹುದ್ದೆಗಳನ್ನು ಸೃಜಿಸಿ ಸರ್ಕಾರದ ಆದೇಶ ದಿನಾಂಕ 21–1–2008ರಲ್ಲಿ ಅನುಮತಿಸಲಾಗಿದೆ. ಸದರಿ ಆದೇಶದಲ್ಲಿ ಈ ಹುದ್ದೆಗಳನ್ನು ಮರು ಹೊಂದಾಣಿಕೆ ಮೂಲಕ (Redeployment only) ಮಾತ್ರವೇ ಭರ್ತಿ ಮಾಡಿಕೊಳ್ಳತಕ್ಕದ್ದು. ಸರ್ಕಾರವು ಈ ಹುದ್ದೆಗಳಿಗೆ ನಿವೃತ್ತಿ ಹೊಂದಿದ ನೌಕರರನ್ನು ಕರಾರು ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲು ಒಪ್ಪಿರುವುದಿಲ್ಲ ಮತ್ತು ಒಂದು ವೇಳೆ ಕೇವಲ ಕನಿಷ್ಠ ಪ್ರಕರಣಗಳಲ್ಲಿ ಶಕ್ತಿ, ಸಾಮರ್ಥ್ಯ, ಕೌಶಲ್ಯಗಳಿರುವ (competence/skill/capability) ಸರ್ಕಾರಿ ನೌಕರರು ಲಭ್ಯವಿಲ್ಲವೆಂದು ಸ್ಥಾಪಿತವಾದಲ್ಲಿ, ಅಂತಹವರನ್ನು ಕನಿಷ್ಠ ಸಂಖ್ಯೆಯಲ್ಲಿ ಹೊರಗುತ್ತಿಗೆ ಆಧಾರದ ಮೇಲೆ ನಿವೃತ್ತ ನೌಕರರನ್ನು ನೇಮಿಸಿಕೊಳ್ಳಲು ಪರಿಗಣಿಸಬಹುದಾಗಿದೆ ಎಂದು ಆದೇಶಿಸಲಾಗಿದೆ ಎಂದೂ, ಈ ಹಿನ್ನೆಲೆಯಲ್ಲಿ ಸಮಿತಿಯಲ್ಲಿ ಹಿರಿಯ ಸಮಾಲೋಚಕರು/ ಸಮಾಲೋಚಕರಾಗಿ ಕಾರ್ಯನಿರ್ವಹಿಸುತ್ತಿರುವ ನಿವೃತ್ತಿ ಹೊಂದಿದ ಈ ಕೆಳಕಂಡ ಅಧಿಕಾರಿಗಳ ನೇಮಕಾತಿ ಬಗ್ಗೆ ಪ್ರತ್ಯೇಕ ಅನುಮೋದನೆ ಹಾಗೂ ಆದೇಶ ಹೊರಡಿಸುವುದು ಅವಶ್ಯಕವಾಗಿದೆ ಎಂದು ವರದಿ ಮಾಡಿರುತ್ತಾರೆ.

| ಕ್ರ. ಸಂ. | ಹೆಸರು | ಹುದ್ದೆ | ಕರ್ತವ್ಯ ನಿರ್ವಹಿಸುತ್ತಿರುವ ದಿನಾಂಕ |
|---|---|---|---|
| 1 | ಕೆ. ಜನಾರ್ಧನ್ ರಾವ್, ನಿವೃತ್ತ ಐ.ಎ.ಎಸ್. ಅಧಿಕಾರಿ | ಹಿರಿಯ ಸಮಾಲೋಕರು | 10–12–2007 |

| ಕ್ರ. ಸಂ. | ಹೆಸರು | ಹುದ್ದೆ | ಕರ್ತವ್ಯ ನಿರ್ವಹಿಸುತ್ತಿರುವ ದಿನಾಂಕ |
|---|---|---|---|
| 2 | ಎಸ್.ಜಿ. ಬಿರಾದಾರ್, ನಿವೃತ್ತ ಹಿರಿಯ ಕೆ.ಎ.ಎಸ್. ಅಧಿಕಾರಿ | ಸಮಾಲೋಚಕರು | 3–12–2007 |
| 3 | ಇ. ಕೃಷ್ಣಮೂರ್ತಿ, ನಿವೃತ್ತ ಉಪ ಕಾರ್ಯದರ್ಶಿ | ಸಮಾಲೋಚಕರು | 14–11–2007 |
| 4 | ಕೆ.ಆರ್. ರಾಮದುರ್ಗ್, ನಿವೃತ್ತ ಉಪ ಕಾರ್ಯದರ್ಶಿ | ಸಮಾಲೋಚಕರು | 13–11–2007 ರಿಂದ 21–1–2007ರವರೆಗೆ ಮಾತ್ರ |
| 5 | ವಿ. ತಿಪ್ಪಶೆಟ್ಟಿ, ನಿವೃತ್ತ ಸಹಾಯಕ ನಿರ್ದೇಶಕರು, ಭಾರತೀಯ ಜನಸಂಖ್ಯಾ ಇಲಾಖೆ | ಸಮಾಲೋಚಕರು | 19–11–2007 |

ಅಲ್ಲದೆ ತಾಲ್ಲೂಕು ಪುನರ್ ರಚನಾ ಸಮಿತಿಗೆ ಮಂಜೂರಾಗಿರುವ 4 ಉಪ ಕಾರ್ಯದರ್ಶಿಗಳು/ ಸಮಾಲೋಚಕರ ಹುದ್ದೆಗಳ ಪೈಕಿ 3 ಹುದ್ದೆಗಳಿಗೆ ಹಾಗೂ 2 ಡೆಮೋಗ್ರಾಫರ್ ಹುದ್ದೆಗಳ ಪೈಕಿ 1 ಹುದ್ದೆಗೆ ಈ ಕೆಳಕಂಡ ನುರಿತ ಅಧಿಕಾರಿಗಳನ್ನು, ಸದರಿಯವರು ಸಮಿತಿಯಲ್ಲಿ ವರದಿ ಮಾಡಿಕೊಂಡ ದಿನಾಂಕದಿಂದ ಜಾರಿಗೆ ಬರುವಂತೆ, ಅವರ ಹೆಸರುಗಳ ಮುಂದೆ ನಮೂದಿಸಿರುವ ಮಾಸಿಕ ಸಂಚಿತ ವೇತನಕ್ಕೆ ಸೀಮಿತಗೊಳಿಸಿ, ಹೊರ ಗುತ್ತಿಗೆಯ ಮೇಲೆ ನೇಮಕ ಮಾಡಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ಕೋರಿರುತ್ತಾರೆ.

| ಕ್ರ. ಸಂ. | ಹೆಸರು ಮತ್ತು ಪದನಾಮ | ಪ್ರಸ್ತಾಪಿಸಿರುವ ಸಂಚಿತ ವೇತನ ರೂ. |
|---|---|---|
| 1 | ಕೆ. ಜನಾರ್ಧನ್ ರಾವ್, ಹಿರಿಯ ಸಮಾಲೋಚಕರು | 25,000–00 |
| 2 | ಎಸ್.ಜಿ. ಬಿರಾದಾರ್, ಸಮಾಲೋಚಕರು | 22,000–00 |
| 3 | ಇ. ಕೃಷ್ಣಮೂರ್ತಿ, ಸಮಾಲೋಚಕರು | 22,000–00 |
| 4 | ವಿ. ತಿಪ್ಪಶೆಟ್ಟಿ, ಸಮಾಲೋಚಕರು | 22,000–00 |

ಶ್ರೀ ಕೆ.ಆರ್. ರಾಮದುರ್ಗ್‌ರವರು ದಿನಾಂಕ 13–11–2007 ರಿಂದ 21–1–2008ರವರೆಗೆ ಮಾತ್ರ ಸಮಿತಿಯಲ್ಲಿ ಕಾರ್ಯನಿರ್ವಹಿಸಿದ್ದು, ಸದರಿ ಅವಧಿಗೆ ಸಂಬಂಧಿಸಿದಂತೆ ಮಾಸಿಕ ರೂ. 22,000–00ಗಳಂತೆ ಸಂಚಿತ ವೇತನವನ್ನು ಪಾವತಿಸಲು ಅನುಮೋದನೆಗೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 9 ಭೂದಾಪು 2008 ಬೆಂಗಳೂರು, ದಿನಾಂಕ: 27ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ತಾಲ್ಲೂಕು ಪುನರ್ ರಚನಾ ಸಮಿತಿಯಲ್ಲಿ ಹಿರಿಯ ಸಮಾಲೋಚಕರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಕೆ. ಜನಾರ್ಧನರಾವ್, ನಿವೃತ್ತ ಐ.ಎ.ಎಸ್. ಅಧಿಕಾರಿ, ಇವರಿಗೆ ಇತರೆ ಯಾವುದೇ ಭತ್ಯೆಗಳಿಲ್ಲದೇ ಸೇವಾ ಸೌಲಭ್ಯಗಳಿಲ್ಲದೇ ಮಾಸಿಕ ರೂ. 25,000–00ಗಳ (ರೂ. ಇಪ್ಪತ್ತೈದು ಸಾವಿರ ಮಾತ್ರ) ಸಂಚಿತವೇತನವನ್ನು, ಸಮಾಲೋಚಕರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಎಸ್.ಜಿ. ಬಿರಾದಾರ್, ಶ್ರೀ ಇ. ಕೃಷ್ಣಮೂರ್ತಿ ಹಾಗೂ ಶ್ರೀ ವಿ. ತಿಪ್ಪಶೆಟ್ಟಿ ನಿವೃತ್ತ ಅಧಿಕಾರಿಗಳಿಗೆ ಇತರೆ ಯಾವುದೇ ಭತ್ಯೆಗಳಿಲ್ಲದೇ, ಸೇವಾ ಸೌಲಭ್ಯಗಳಿಲ್ಲದೇ ಮಾಸಿಕ ರೂ. 20,000–00 (ರೂ. ಇಪ್ಪತ್ತು ಸಾವಿರ ಮಾತ್ರ)ಗಳನ್ನು ಸಂಚಿತ ವೇತನವಾಗಿ ನೀಡಲು ಹಾಗೂ ಶ್ರೀ ಕೆ.ಆರ್. ರಾಮದುರ್ಗ್, ಸಮಾಲೋಚಕರಾಗಿ ಕಾರ್ಯ ನಿರ್ವಹಿಸಿರುವ ಅವಧಿ ಅಂದರೆ ದಿನಾಂಕ 13–11–2007 ರಿಂದ 21–1–2008ರವರೆಗೆ ಮಾಸಿಕ ರೂ. 20,000–00ರಂತೆ (ರೂ. ಇಪ್ಪತ್ತು ಸಾವಿರ ಮಾತ್ರ) ಸಂಚಿತ ವೇತನವಾಗಿ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 172 ವೆಚ್ಚ–7/2008, ದಿನಾಂಕ 20–3–2008ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 604

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ)

**PERSONNEL AND ADMINISTRATIVE REFORMS SECRETARIAT**

**Sub :** Creation of a Special Cell for looking after all matters concerning the Special Development Plan.

**Preamble:**

In Budget Speech 2007-08 mention was made regarding creation of a Special Cell in Planning Department to monitor the implementation of Special Development Plan. Further, in the Executive Committee meeting held on 7-12-2007 approval has been accorded for creation of a Special Cell in Planning Department by clubbing the Plan Monitoring and Information Division, Evaluation Division and Area Development Board Division. The Special Cell is to be headed by an officer of the cadre of Additional Secretary to Government. Hence the following order.

**G.O. No. DPAR 29 SGO 2008. Bangalore, Dated 27th February 2008**

Sanction is accorded for creation of a post in the cadre of Additional Secretary to Government along with the personal staff as detailed in Annexure to this Government Order, whose tenure will be upto 30-3-2009 in the first instance. Sanction is also accorded for carving a Special Cell in Planning Department by shifting three functional divisions, namely Plan Monitoring and Information Division, Evaluation Division and Area Development Board Division. Separate Order on allocation of work to the Special Cell will be issued by Planning Department.

This Order issued with the concurrence of Finance Department vide U.O. Note No. FD 503 Exp-7 2007, dated 7-6-2007.

By order and in the name of the President of India,

**K.G. ANANTHA**

Under Secretary to Government,

D.P.A.R. (Services-3)

**ANNEXURE**

**G.O. No. DPAR 29 SGO 2008, Dated 27-2-2008**

**Posts sanctioned to the personnal establishment of Special/ Additional Secretary**

| | | |
|---|---|---|
| 1. | Stenographer | 1 |
| 2. | Junior Assistant | 1 |
| 3. | Dalayat/ Jamedar | By Outsourcing |

**K.G. ANANTHA**

PR. 393

Under Secretary to Government,

D.P.A.R. (Services-3)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಸಹ ಕಾರ್ಯದರ್ಶಿ ಹುದ್ದೆಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 02, ದಿ: 7–3–2003.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 48 ಸಸಿವಿ 02, ದಿ: 3–6–2003.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 04, ದಿ: 6–1–2005.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 05, ದಿ: 14–7–2005.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಸಸಿವಿ 06, ದಿ: 25–2–2005.
6. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 50 ಸಸಿವಿ 06 ದಿ: 27–6–2006.
7. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 07 ದಿ: 20–3–2007.

**ಪ್ರಸ್ತಾವನೆ :**

ಮೇಲೆ (7)ರಲ್ಲಿ ಓದಲಾದ ದಿನಾಂಕ 20–3–2007ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ತಾತ್ಕಾಲಿಕ ಹುದ್ದೆಗಳನ್ನು ದಿ: 7–3–07 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ. ಸದರಿ ತಾತ್ಕಾಲಿಕ ಹುದ್ದೆಗಳ ಮುಂದುವರಿಸಿ ದಿ: 6–3–2008ರಂದು ಮುಕ್ತಾಯವಾಗುವುದರಿಂದ, ಸದರಿ ಹುದ್ದೆಗಳನ್ನು ಮುಂದುವರಿಸುವ ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 626 ಸಅಸೇ 2007, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಸಾರ್ವಜನಿಕ ಉದ್ದಿಮೆಗಳ ಇಲಾಖೆಯಲ್ಲಿನ ಈ ಕೆಳಕಂಡ ತಾತ್ಕಾಲಿಕ ಹುದ್ದೆಗಳನ್ನು ದಿನಾಂಕ 7–3–2008 ರಿಂದ ಜಾರಿಗೆ ಬರುವಂತೆ ಮತ್ತೆ ಒಂದು ವರ್ಷದ ಅವಧಿಗೆ ಮುಂದುವರಿಸಲಾಗಿದೆ.

| ಕ್ರ.ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಜಂಟಿ ಕಾರ್ಯದರ್ಶಿ | 1 ಹುದ್ದೆ |
| 2 | ಆರ್ಥಿಕ ಸಲಹೆಗಾರರು | 1 ಹುದ್ದೆ |
| 3 | ಉಪ ಕಾರ್ಯದರ್ಶಿ | 1 ಹುದ್ದೆ |
| 4 | ಅಧೀನ ಕಾರ್ಯದರ್ಶಿ | 2 ಹುದ್ದೆಗಳು |
| 5 | ಶಾಖಾಧಿಕಾರಿ | 3 ಹುದ್ದೆಗಳು |
| 6 | ಪತ್ರಾಂಕಿತ ಆಪ್ತ ಸಹಾಯಕರು | 1 ಹುದ್ದೆ |
| 7 | ಭಾಷಾಂತರಕಾರರು (ಶಾಖಾಧಿಕಾರಿ) | 1 ಹುದ್ದೆ |
| 8 | ಹಿರಿಯ ಸಹಾಯಕರು | 2 ಹುದ್ದೆಗಳು |
| 9 | ಸಹಾಯಕ ಸಾಂಖ್ಯಿಕ ಅಧಿಕಾರಿ | 1 ಹುದ್ದೆ |
| 10 | ಶೀಘ್ರಲಿಪಿಗಾರರು (ಗಣಕಯಂತ್ರ ಜ್ಞಾನವನ್ನು ಹೊಂದಿರುವವರು) | 12 ಹುದ್ದೆಗಳು |
| 11 | ಡಾಟಾ ಎಂಟ್ರಿ ಆಪರೇಟರ್ | 2 ಹುದ್ದೆಗಳು |
| 12 | ಸಹಾಯಕರು | 3 ಹುದ್ದೆಗಳು |
| 13 | ಕಿರಿಯ ಸಹಾಯಕರು | 5 ಹುದ್ದೆಗಳು |
| 14 | ಬೆರಳಚ್ಚುಗಾರರು | 1 ಹುದ್ದೆ |
| 15 | ಚಾಲಕರು | 4 ಹುದ್ದೆಗಳು |
| 16 | ದಲಾಯತ್ | 11 ಹುದ್ದೆಗಳು |
| | **ಒಟ್ಟು** | **51 ಹುದ್ದೆಗಳು** |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಪ್ರತ್ಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 402

**ಕೆ.ಜಿ. ಅನಂತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸು ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ :** ತಾಲ್ಲೂಕು ಪುನರ್ ರಚನಾ ಸಮಿತಿಯ ಸದಸ್ಯರಾದ ಶ್ರೀ ಎಸ್. ಕೃಷ್ಣಕುಮಾರ್, ಐ.ಎ.ಎಸ್. (ನಿವೃತ್ತ) ಇವರ ಹೆಸರನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಕಂಇ 28 ಭೂದಾಮು 2007, ದಿ: 29–8–2007.
2. ಸರ್ಕಾರದ ಆದೇಶ ಸಂ. ಕಂಇ 28 ಭೂದಾಮು 2007, ದಿ: 5–10–2007.
3. ಶ್ರೀ ಎಸ್. ಕೃಷ್ಣಕುಮಾರ್, ಮಾನ್ಯ ಘನತೆವೆತ್ತ ಕರ್ನಾಟಕ ರಾಜ್ಯಪಾಲರ ಸಲಹೆಗಾರರು, ಬೆಂಗಳೂರು ಇವರ ಪತ್ರ ಸಂಖ್ಯೆ. ಜಿಎ(ಟಿ) 1028/08, ದಿ: 12–2–2008.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 29–8–2007ರಲ್ಲಿ ರಾಜ್ಯದಲ್ಲಿ ಹೊಸ ತಾಲ್ಲೂಕುಗಳ ಪುನರ್‌ರಚನೆ ಮಾಡುವ ಬಗ್ಗೆ ಅಧ್ಯಯನ ನಡೆಸಿ ವರದಿ ಸಲ್ಲಿಸಲು ಒಬ್ಬ ಅಧ್ಯಕ್ಷರು ಮತ್ತು 4 ಜನ ಸದಸ್ಯರಿರುವ ತಾಲ್ಲೂಕು ಪುನರ್‌ರಚನಾ ಸಮಿತಿ ರಚಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶ ದಿನಾಂಕ 5–10–2007ರಲ್ಲಿ ಹೊಸ ತಾಲ್ಲೂಕುಗಳ ಪುನರ್ ರಚನಾ ಸಮಿತಿಗೆ ಈ ಕೆಳಕಂಡ ತಜ್ಞರನ್ನು ನೇಮಿಸಿ ಆದೇಶಿಸಲಾಗಿರುತ್ತದೆ.

1. ಶ್ರೀ ಎಂ.ಬಿ. ಪ್ರಕಾಶ್, ಐ.ಎ.ಎಸ್. (ನಿವೃತ್ತ) ಅಧ್ಯಕ್ಷರು
2. ಶ್ರೀ ಚಿರಂಜೀವಿಸಿಂಗ್, ಐ.ಎ.ಎಸ್. (ನಿವೃತ್ತ) ಸದಸ್ಯರು
3. ಶ್ರೀ ಕೃಷ್ಣಕುಮಾರ್, ಐ.ಎ.ಎಸ್. (ನಿವೃತ್ತ) ಸದಸ್ಯರು

4. ಶ್ರೀ ಹೆಚ್.ಕೆ. ಶಿವಾನಂದ, ಐ.ಎ.ಎಸ್. (ನಿವೃತ್ತ) ಸದಸ್ಯರು
5. ಶ್ರೀ ಹೆಚ್. ಶಶಿಧರ್, ಐ.ಎ.ಎಸ್ ಸದಸ್ಯ ಕಾರ್ಯದರ್ಶಿ
(ಪ್ರಸ್ತುತ ನೋಂದಣಿ ಮಹಾಪರಿವೀಕ್ಷಕರು)

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಎಸ್. ಕೃಷ್ಣಕುಮಾರ್, ಮಾನ್ಯ ಘನತೆವೆತ್ತ ಕರ್ನಾಟಕ ರಾಜ್ಯಪಾಲರ ಸಲಹೆಗಾರರು, ಇವರು ಪ್ರಸ್ತುತ ರಾಜ್ಯದಲ್ಲಿ ರಾಷ್ಟ್ರಪತಿ ಆಡಳಿತ ಜಾರಿಗೆ ಬಂದ ನಂತರ ಘನತೆವೆತ್ತ ರಾಜ್ಯಪಾಲರ ಸಲಹೆಗಾರರಾಗಿ ನೇಮಕಗೊಂಡಿರುವ ಹಿನ್ನೆಲೆಯಲ್ಲಿ ತಾಲ್ಲೂಕು ಪುನರ್ ರಚನಾ ಸಮಿತಿಯ ಸದಸ್ಯರಾಗಿ ಮುಂದುವರೆಯಲು ಸಾಧ್ಯವಾಗುತ್ತಿಲ್ಲವೆಂದು ಇದರಿಂದ ತಾಲ್ಲೂಕು ಪುನರ್ ರಚನಾ ಸಮಿತಿಯ ಸದಸ್ಯರಾಗಿ ನೇಮಿಸಿರುವುದನ್ನು ಕೈಬಿಟ್ಟು ಆದೇಶಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 16 ಭೂದಾಪು 2008 ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2008.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಎಸ್. ಕೃಷ್ಣಕುಮಾರ್, ಐ.ಎ.ಎಸ್.(ನಿವೃತ್ತ) ಇವರನ್ನು ಸರ್ಕಾರದ ಆದೇಶ ಸಂಖ್ಯೆ: ಕಂಇ 28 ಭೂದಾಪು 2007, ದಿ: 5–10–2007ರಲ್ಲಿ ಹೊಸ ತಾಲ್ಲೂಕು ಪುನರ್ ರಚನಾ ಸಮಿತಿಯ ಸದಸ್ಯರನ್ನಾಗಿ ನೇಮಕ ಮಾಡಿರುವುದನ್ನು ತಕ್ಷಣದಿಂದ ಜಾರಿಗೆ ಬರುವಂತೆ ಕೈಬಿಡಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 409

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ)

**ಸಹಕಾರ ಸಚಿವಾಲಯ**

**ವಿಷಯ :** ಸಾರಿಗೆ ಸಹಕಾರ ಸಂಘ ನಿ., ಕೊಪ್ಪ, ಚಿಕ್ಕಮಗಳೂರು ಜಿಲ್ಲೆ ಇವರು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 29ಸಿಗೆ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:**
1. ಸಾರಿಗೆ ಸಹಕಾರ ಸಂಘ ನಿ., ಅಧ್ಯಕ್ಷರ ಪತ್ರದ ಸಂಖ್ಯೆ: ಆಡಳಿತ/2794/2007–08, ದಿನಾಂಕ 1–12–2007 ಹಾಗೂ ಸಂ: ಆಡಳಿತ/ 3165/2007–08, ದಿನಾಂಕ 22–12–2007.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ ಒಟಿಎಸ್/463/ಹೆಚ್ಒಟಿ/2002–2008 ದಿನಾಂಕ 25–1–2008.

**ಪ್ರಸ್ತಾವನೆ :**

ಸಾರಿಗೆ ಸಹಕಾರ ಸಂಘ ನಿಯಮಿತ, ಕೊಪ್ಪ ಇದು ಒಂದು ವಿಶಿಷ್ಟ ರೀತಿಯ ಸಂಘವಾಗಿದ್ದು ವಿಶಿಷ್ಟ ಸನ್ನಿವೇಶದಲ್ಲಿ ಅಂದರೆ 1990–91ರಲ್ಲಿ ಚಿಕ್ಕಮಗಳೂರು ಜಿಲ್ಲೆಯ ಕೊಪ್ಪದಲ್ಲಿ ಅಸ್ತಿತ್ವದಲ್ಲಿದ್ದ ಖಾಸಗೀ ಸಾರಿಗೆ ಸಂಸ್ಥೆ ದಿ ಶಂಕರ್ ಟ್ರಾನ್ಸ್‌ಪೋರ್ಟ್ ಕಂಪನಿ ಬೀಗ ಮುದ್ರೆಗೊಂಡು ಅದರಲ್ಲಿದ್ದ ನೂರಾರು ಕಾರ್ಮಿಕರು ಉದ್ಯೋಗರಹಿತರಾದಾಗ ಅವರಿಗೆ ಮತ್ತು ಅವರ ಕುಟುಂಬಗಳಿಗೆ ಉದ್ಯೋಗ ಹಾಗೂ ಜೀವನ ಒದಗಿಸಲು ಉದ್ಯೋಗರಹಿತವಾದ ಎಲ್ಲಾ ಕಾರ್ಮಿಕರು ಒಗ್ಗೂಡಿ ಸಹಕಾರಿ ತತ್ವದ ಮೇಲೆ ಸ್ಥಾಪಿಸಲಾಗಿದೆ ಎಂದೂ ಈ ಸಂಘದ ವೈಶಿಷ್ಟ್ಯ ಏನೆಂದರೆ ಕೆಲಸ ನಿರ್ವಹಿಸುವ ನೌಕರರೇ ಸಂಘದ ಸದಸ್ಯರಾಗಿ ಅಂತಹ ಸದಸ್ಯರೇ ಆಡಳಿತ ಮಂಡಳಿಯ ಸದಸ್ಯರಾಗಿ/ ಪದಾಧಿಕಾರಿಗಳಾಗಿ ಸಂಘದ ಸಂಪೂರ್ಣ ವಹಿವಾಟುಗಳನ್ನು ನಡೆಸಿಕೊಂಡು ಹೋಗುತ್ತಿದ್ದಾರೆ ಎಂದೂ ನೌಕರರೇ ಸದಸ್ಯರು ಹಾಗೂ ಸದಸ್ಯರೇ ಆಡಳಿತ ಮಂಡಳಿಯ ನಿರ್ದೇಶಕರಾಗಿ/ ಪದಾಧಿಕಾರಿಗಳಾಗಿ ಕೆಲಸ ಮಾಡುವುದರೊಂದಿಗೆ ಕಾರ್ಮಿಕ–ಮಾಲೀಕ ಎನ್ನುವಂತಹ ಭೇದವಿಲ್ಲದಂತೆ ಸಂಸ್ಥೆಯನ್ನು ನಡೆಸಿಕೊಂಡು ಹೋಗಲು ಪ್ರಾಮಾಣಿಕ ಪ್ರಯತ್ನದಿಂದ ಸಂಸ್ಥೆಯನ್ನು ಹುಟ್ಟುಹಾಕಲಾಗಿರುತ್ತದೆ ಎಂದೂ ಸದರಿ ಸಂಘದಲ್ಲಿ 194 ಜನ ಸದಸ್ಯರು/ ನೌಕರರು ಇದ್ದು ಸಂಘವು 80 ವಾಹನಗಳನ್ನು ಹೊಂದಿ ಚಿಕ್ಕಮಗಳೂರು ಜಿಲ್ಲೆ, ಶಿವಮೊಗ್ಗ ಜಿಲ್ಲೆ, ಉಡುಪಿ ಜಿಲ್ಲೆ, ದಾವಣಗೆರೆ ಜಿಲ್ಲೆಗಳಲ್ಲಿ ಉದ್ಯಮವನ್ನು ನಡೆಸುತ್ತಾ, ಸದರಿ ಪ್ರದೇಶಗಳ ನಗರ ಮತ್ತು ಮಲೆನಾಡಿನ ಗ್ರಾಮೀಣ ಭಾಗಗಳ ಪ್ರಯಾಣಿಕರಿಗೆ ಉತ್ತಮ ಸಾರಿಗೆ ಸೌಲಭ್ಯವನ್ನು ನೀಡುತ್ತಿರುವುದಲ್ಲದೇ ದಿನವಹಿ ಸುಮಾರು 16,000 ಕಿ.ಮೀ. ನಷ್ಟು ಸಂಘದ ಬಸ್ಸುಗಳು ಸಂಚರಿಸಿ ಪ್ರಯಾಣಿಕರ ಬೇಡಿಕೆಯನ್ನು ನೀಗಿಸುವತ್ತಾ ಈ ಸಂಘವು ವಿಶೇಷವಾದ ಸೇವೆಯನ್ನು ನೀಡುತ್ತಿದೆ ಎಂದೂ ಈ ಸಂಘವು 2006–07ನೇ ಸಾಲಿನಲ್ಲಿ ರೂ. 3,09,017,35 ನಿವ್ವಳ ಲಾಭ ಗಳಿಸಿರುತ್ತದೆ ಎಂದೂ ವರದಿ ಮಾಡುತ್ತಾ ಸದರಿ ಸಂಘದ ಅಧ್ಯಕ್ಷರು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 29ಸಿಗೆ ಮತ್ತು ನಿಯಮ 18(ಎ)(8)(ಬಿ)ಗೆ ವಿನಾಯಿತಿ ಕೊಡುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಕೋರಿರುತ್ತಾರೆ. ಮೇಲೆ ಓದಲಾದ (2)ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಇದೊಂದು ವಿಶೇಷ ಸಹಕಾರ ಸಂಘವಾಗಿದ್ದು ಉತ್ತಮ ರೀತಿಯಲ್ಲಿ ಸದಸ್ಯರಿಗೆ ಹಾಗೂ ಸಾರ್ವಜನಿಕರಿಗೆ ಸೇವೆ ಸಲ್ಲಿಸುತ್ತಿರುವುದರಿಂದ ಸದರಿ ಸಂಘಕ್ಕೆ ವಿಶೇಷ ಪ್ರಕರಣವೆಂದು

ಪರಿಗಣಿಸಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರನ್ವಯ ವಿನಾಯ್ತಿ ನೀಡಲು ಶಿಫಾರಸ್ಸು ಮಾಡಿದ್ದಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 276 ಸಿಎಲ್‌ಎಮ್ 2007, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂಗತಿಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ಸರ್ಕಾರವು ಸಾರಿಗೆ ಸಹಕಾರ ಸಂಘ ನಿಯಮಿತ, ಕೊಪ್ಪ, ಚಿಕ್ಕಮಗಳೂರು ಜಿಲ್ಲೆ ಇದಕ್ಕೆ ಸದರಿ ಅಧಿನಿಯಮದ ಪ್ರಕರಣ 29ಸಿ (1)(ಇ)ದ ವ್ಯಾಪ್ತಿಯಿಂದ ವಿನಾಯಿತಿ ನೀಡಲಾಗಿದೆ ಎಂದು ಆದೇಶಿಸುತ್ತದೆ.

ಭಾರತ ಸರ್ಕಾರದ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 412

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

## ವಸತಿ ಸಚಿವಾಲಯ

**ವಿಷಯ :** 2007–08ನೇ ಸಾಲಿನಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 4ನೇ ತ್ರೈಮಾಸಿಕ ಕಂತಿನ ಅನುದಾನ ಬಿಡುಗಡೆ ಬಗ್ಗೆ.

**ಓದಲಾಗಿದೆ:**
1. ಸರ್ಕಾರ ಆದೇಶ ಸಂಖ್ಯೆ: ವಇ 21 ಕೊಮಂಲೆ 2007, ಬೆಂಗಳೂರು ದಿನಾಂಕ 26–6–2007.
2. ಸರ್ಕಾರ ಆದೇಶ ಸಂಖ್ಯೆ: ವಇ 21 ಕೊಮಂಲೆ 2007, ಬೆಂಗಳೂರು ದಿನಾಂಕ 27–9–2007.
3. ಸರ್ಕಾರ ಆದೇಶ ಸಂಖ್ಯೆ: ವಇ 21 ಕೊಮಂಲೆ 2007, ಬೆಂಗಳೂರು ದಿನಾಂಕ 27–11–2007.
4. ಸರ್ಕಾರ ಆದೇಶ ಸಂಖ್ಯೆ: ವಇ 21 ಕೊಮಂಲೆ 2007, ಬೆಂಗಳೂರು ದಿನಾಂಕ 19–12–2007.
5. ಆಯುಕ್ತರು, ಕಕೊನಿಮ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಕೊನಿಮ/ಲೆಪಶಾ/ಅನುದಾನ: 2007–08, ದಿನಾಂಕ 23–1–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿ ಮೊದಲನೇ ತ್ರೈಮಾಸಿಕ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ. 117.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 836.07 ಲಕ್ಷಗಳು ಒಟ್ಟು ರೂ. 953.57 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (2)ರಲ್ಲಿ ಎರಡನೇ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ. 117.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 835.33 ಲಕ್ಷಗಳು ಒಟ್ಟು ರೂ. 952.83 ಲಕ್ಷಗಳನ್ನು ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (3)ರಲ್ಲಿ ಮೂರನೇ ಕಂತಿನ ಅನುದಾನ ಯೋಜನೆಯಡಿಯಲ್ಲಿ ರೂ. 117.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 62.50 ಲಕ್ಷಗಳು ಒಟ್ಟು ರೂ. 180.00 ಲಕ್ಷಗಳನ್ನು ಇಲಾಖೆಯ ಪ್ರಧಾನ ಕಾರ್ಯದಶಿರವರಿಗೆ ನೀಡಲಾಗಿರುವ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿಡುಗಡೆ ಮಾಡಲಾಗಿರುತ್ತದೆ. ಕ್ರಮ ಸಂಖ್ಯೆ (4)ರಲ್ಲಿ ಬಾಕಿ ಇದ್ದ ಹುಡ್ಕೋ ಸಾಲಗಳ ಮೆಲುಸ್ತುವಾರಿ ಲೆಕ್ಕಶೀರ್ಷಿಕೆ ಅಡಿಯಲ್ಲಿ ಮೂರನೇ ತ್ರೈಮಾಸಿಕ ಕಂತಾಗಿ ರೂ. 7,42,21,944.00ನ್ನು ಬಿಡುಗಡೆ ಮಾಡಲಾಗಿದೆ.

ಕ್ರಮ ಸಂಖ್ಯೆ (5)ರಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2007–08ನೇ ಸಾಲಿನ 4ನೇ ತ್ರೈಮಾಸಿಕ ಕಂತಿನ ಅನುದಾನ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 112.50 ಲಕ್ಷಗಳು, ಕೊಳಚೆ ಸುಧಾರಣೆ–ಸಹಾಯ ಧನ ರೂ. 67.50 ಲಕ್ಷಗಳು ಹಾಗೂ ಹುಡ್ಕೋ ಸಾಲುಗಳ ಮೇಲು ಉಸ್ತುವಾರಿ ರೂ. 728.98 ಲಕ್ಷಗಳು ಒಟ್ಟು ಯೋಜನೆಯಡಿ ರೂ. 117.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 791.48 ಲಕ್ಷಗಳು ಒಟ್ಟು ರೂ. 908.98 ಲಕ್ಷಗಳನ್ನು ಮಂಡಳಿಗೆ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 112.50 ಲಕ್ಷಗಳು, ಕೊಳಚೆ ಸುಧಾರಣೆ–ಸಹಾಯಕ ಧನ ರೂ. 67.50 ಲಕ್ಷಗಳು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ ರೂ. 728.48 ಲಕ್ಷಗಳು ಒಟ್ಟು ಯೋಜನೆಯಡಿ ರೂ. 117.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 791.48 ಲಕ್ಷಗಳು ಒಟ್ಟು ರೂ. 908.98 ಲಕ್ಷಗಳನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 21 ಕೊಮಂಲೆ 2007, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2008.**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ 2007–08ನೇ ಸಾಲಿಗೆ 4ನೇ ತ್ರೈಮಾಸಿಕ ಕಂತಾಗಿ ಸಿಬ್ಬಂದಿ ವೆಚ್ಚಕ್ಕೆ (ಯೋಜನೆ ಮತ್ತು ಯೋಜನೇತರಡಿ) ರೂ. 112.50 ಲಕ್ಷಗಳು, ಕೊಳಚೆ

ಸುಧಾರಣೆ–ಸಹಾಯ ಧನ ರೂ. 67.50 ಲಕ್ಷಗಳು ಹಾಗೂ ಹುಡ್ಕೋ ಸಾಲಗಳ ಮೇಲು ಉಸ್ತುವಾರಿ ರೂ. 728.98 ಲಕ್ಷಗಳು ಒಟ್ಟು ಯೋಜನೆಯಡಿ ರೂ. 117.50 ಲಕ್ಷಗಳು ಹಾಗೂ ಯೋಜನೇತರಡಿಯಲ್ಲಿ ರೂ. 791.48 ಲಕ್ಷಗಳು ಒಟ್ಟು ರೂ. 908.98 ಲಕ್ಷಗಳನ್ನು (ಒಂಭತ್ತು ಕೋಟಿ ಎಂಟು ಲಕ್ಷದ ತೊಂಭತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಬಿಡುಗಡೆ ಮಾಡಿ ಸರ್ಕಾರ ಆದೇಶಿಸಿದೆ.

ರೂ. ಲಕ್ಷಗಳಲ್ಲಿ

| ಕ್ರಮ ಸಂಖ್ಯೆ | ಲೆಕ್ಕಶೀರ್ಷಿಕೆ | 2007–08ನೇ ಸಾಲಿನ ನಾಲ್ಕನೇ ತ್ರೈಮಾಸಿಕ | |
|---|---|---|---|
| | | ಯೋಜನೆ | ಯೋಜನೇತರ |
| 1 | ಸಿಬ್ಬಂದಿ ವೆಚ್ಚ 2217–04–191–2–01 (ಯೋಜನೆ) | 50.00 | 62.50 |
| 2 | ಕೊಳಚೆ ಸುಧಾರಣೆ ಸಹಾಯಧನ 2217–04–191–2–02 | 67.50 | |
| 3 | ಹುಡ್ಕೋ ಸಾಲಗಳ ಮೇಲುಸ್ತುವಾರಿ 4217–60–800–3–01 | – | 728.98 |
| | **ಒಟ್ಟು** | **117.50** | **791.48** |

ಈ ಹಣಕಾಸಿನ ಬಗ್ಗೆ ಈ ಕೆಳಕಂಡ ನಿಬಂಧನೆಗಳನ್ನು ವಿಧಿಸಿದೆ.

1. ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ, ಬೆಂಗಳೂರು ಇವರು ಹಣ ಬಿಡುಗಡೆ ಮಾಡುವ ಬಿಲ್ಲಿಗೆ ಮೇಲು ರುಜು ಮಾಡಲು ಅಧಿಕೃತವಾಗಿರುತ್ತದೆ.
2. ಈ ಆದೇಶದಲ್ಲಿ ಬಿಡುಗಡೆ ಮಾಡಲಾಗಿರುವ ಅನುದಾನದ ಬಗ್ಗೆ ಪ್ರತ್ಯೇಕ ಲೆಕ್ಕವನ್ನು ಇಡತಕ್ಕದ್ದು.
3. ಯಾವ ಉದ್ದೇಶಕ್ಕಾಗಿ ಹಣ ಬಿಡುಗಡೆ ಮಾಡಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.
4. ಪ್ರಸಕ್ತ ಸಾಲಿನಲ್ಲಿ ಬಿಡುಗಡೆ ಮಾಡಿದ ಹಣಕಾಸಿನ ಮೊತ್ತಕ್ಕೆ ಬಳಕೆ ಪ್ರಮಾಣ ಪತ್ರವನ್ನು ಮಹಾಲೇಖಪಾಲರು, ಕರ್ನಾಟಕ, ಬೆಂಗಳೂರು ಇವರಿಗೆ ಕಳುಹಿಸಿ ಅದರ ಪ್ರತಿಯನ್ನು ಸರ್ಕಾರಕ್ಕೆ ಕಳುಹಿಸುವುದು.

ಆರ್ಥಿಕ ಇಲಾಖೆಯ ಆದೇಶ ಸಂ. FD 140 Exp.9, 2008, ದಿನಾಂಕ 1–3–2008ರ ಸಹಮತಿಯೊಂದಿಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಭಾರತ ಸರ್ಕಾರದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 433

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) ವಿಭಾಗದಲ್ಲಿನ ಜಂಟಿ ಕಾರ್ಯದರ್ಶಿ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 77 ಸಸಿವಿ 2003, ದಿನಾಂಕ 27–10–2003.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 86 ಸಸಿವಿ 2004, ದಿನಾಂಕ 8–11–2004.
3. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 68 ಸಸಿವಿ 2005, ದಿನಾಂಕ 16–11–2005.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 140 ಆಸೇವ 2005, ದಿನಾಂಕ 18–2–2006.
5. ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 42 ಇಆಇ 2004, ದಿನಾಂಕ 31–7–2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ 27–10–2003ರ ಸರ್ಕಾರದ ಆದೇಶದಲ್ಲಿ ಸಿಆಸು ಇಲಾಖೆಯ (ಇ–ಆಡಳಿತ) (ಆಡಳಿತ ಸುಧಾರಣೆ) ವಿಭಾಗದಲ್ಲಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲಾಗಿದೆ.

1. ಉಪ ಕಾರ್ಯದರ್ಶಿ 1 ಹುದ್ದೆ
2. ಹಿರಿಯ ಶೀಘ್ರಲಿಪಿಗಾರ 1 ಹುದ್ದೆ
3. ಕಿರಿಯ ಸಹಾಯಕ 1 ಹುದ್ದೆ
4. ದಲಾಯತ್ 1 ಹುದ್ದೆ

ಮೇಲೆ (2) ಮತ್ತು (3)ರಲ್ಲಿ ಓದಲಾದ ಸರ್ಕಾರದ ಆದೇಶಗಳಲ್ಲಿ ಮೇಲ್ಕಂಡ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರಿಸಲಾಗಿತ್ತು. ಮೇಲೆ (4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ಉಪ ಕಾರ್ಯದರ್ಶಿ ಹುದ್ದೆಯನ್ನು ಜಂಟಿ ಕಾರ್ಯದರ್ಶಿ ಹುದ್ದೆಯೆಂದು ಉನ್ನತೀಕರಿಸಿ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿ: 9–9–2007ರವರೆಗೆ ಮುಂದುವರಿಸಲಾಗಿದ್ದು, ಈ ಹುದ್ದೆಗಳನ್ನು ಪುನಃ 2 ವರ್ಷ ಅವಧಿಗೆ ಮುಂದುವರಿಸಲು ಮೇಲೆ (5)ರಲ್ಲಿ ಓದಲಾದ ದಿನಾಂಕ: 31–7–2007ರ ಅನಧಿಕೃತ ಟಿಪ್ಪಣಿಯಲ್ಲಿ ಸಿಆಸುಇ (ಇ–ಆಡಳಿತ)ದ ಸರ್ಕಾರದ ಕಾರ್ಯದರ್ಶಿಯವರು ಕೋರಿದ್ದಾರೆ.

ಅದರಂತೆ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 39 ಸಅಸೇ 2008, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2008.**

ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ) ವಿಭಾಗದಲ್ಲಿನ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ 9–9–2007 ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸಿ ಆದೇಶಿಸಿದೆ.

| | | |
|---|---|---|
| 1. | ಜಂಟಿ ಕಾರ್ಯದರ್ಶಿ | 1 ಹುದ್ದೆ |
| 2. | ಹಿರಿಯ ಶೀಘ್ರಲಿಪಿಗಾರ | 1 ಹುದ್ದೆ |
| 3. | ಕಿರಿಯ ಸಹಾಯಕ | 1 ಹುದ್ದೆ |
| 4. | ದಲಾಯತ್ | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10–7–1996ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 306

**ಕೆ.ಜಿ. ಅನಂತ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸು ಇಲಾಖೆ (ಸೇವೆಗಳು–3)

**ಕಂದಾಯ ಸಚಿವಾಲಯ**

**ವಿಷಯ :** ಶ್ರೀ ಜಿ.ಎಸ್. ಗಡದವರ, ಭೂಮಾಪನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತ ತಪಾಸಕರು ಮತ್ತು ಶ್ರೀ ಎಸ್.ಎಸ್. ಗಾಣಗಿ ಪ್ರಥಮ ದರ್ಜೆ ಸಹಾಯಕರು ಇವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಕಂಇ 12 ಭೂದಾಸೇ(1) 2006, ದಿ: 27–4–2006.
2. ಆಯುಕ್ತರು, ಭೂಕಂದಾಯ ವ್ಯವಸ್ಥೆ ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆರವರ ಕಾರಣ ಕೇಳಿ ನೋಟೀಸು ಸಂಖ್ಯೆ: ಸಿಬ್ಬಂದಿ. ಶಿಸ್ತು(ಎಂ1) 101: 2002–2003, ದಿನಾಂಕ 25–5–2006.
3. ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತ ತಪಾಸಕರು ರವರ ದಿ: 14–6–2006ರ ಲಿಖಿತ ರಕ್ಷಣ ಹೇಳಿಕೆ ಶ್ರೀ ಎಸ್.ಬಿ. ಗಾಣಗಿ, ಪ್ರ.ದ.ಸ. ರವರ ದಿ: 23–6–2006ರ ಲಿಖೀತ ಹೇಳಿಕೆ ಶ್ರೀ ಗಡದವರವರ, ಭೂಮಾಪನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರುರವರ ದಿ: 7–6–2006ರ ಲಿಖಿತ ಹೇಳಿಕೆ.
4. ಆಯುಕ್ತರು, ಭೂಕಂದಾಯ ವ್ಯವಸ್ಥೆ ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆರವರ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ. ಸಿಬ್ಬಂದಿ.ಶಿಸ್ತು. (ಎಂ1).101:2002–2003, ದಿ: 13–9–2006.
5. ವಿಚಾರಣಾಧಿಕಾರಿಯವರ ವಿಚಾರಣಾ ವರದಿ ಸಂಖ್ಯೆ: ಸಿಬ್ಬಂದಿ.ಶಿಸ್ತು. (ಎಂ1) 01/ 2002–03, ದಿ: 10–4–2007.
6. ಆಯುಕ್ತರು, ಭೂಕಂದಾಯ ವ್ಯವಸ್ಥೆ ಭೂಮಾಪನ ಮತ್ತು ಭೂದಾಖಲೆಗಳ ಇಲಾಖೆರವರ ಆರೋಪಿತರಿಗೆ 2ನೇ ಕಾರಣ ಕೇಳಿ ನೋಟೀಸು ಸಂಖ್ಯೆ: ಸಿಬ್ಬಂದಿ.ಶಿಸ್ತು.101/2002–03, ದಿ: 14–6–2007.

7. ಶ್ರೀ ಜಿ.ಎಸ್. ಗಡದವರ್‌ರವರ 2ನೇ ಕಾರಣ ಕೇಳಿ ನೋಟಿಸ್ಸಿಗೆ ದಿ: 20–6–2007ರ ಲಿಖಿತ ಉತ್ತರ.
8. ಶ್ರೀ ಬ್ಯಾಕೋಡಿ ರವರ 2ನೇ ಕಾರಣ ಕೇಳಿ ನೋಟಿಸ್ಸಿಗೆ ದಿ: 23–6–2007ರ ಲಿಖಿತ ಉತ್ತರ.
9. ಶ್ರೀ ಗಾಣಗಿ ರವರ 2ನೇ ಕಾರಣ ಕೇಳಿ ನೋಟಿಸ್ಸಿಗೆ ದಿ: 28–6–2007ರ ಲಿಖಿತ ಉತ್ತರ.

**ಪ್ರಸ್ತಾವನೆ :**

ಶ್ರೀ ಜಿ.ಎಸ್. ಗಡದವರ್, ಹಿಂದಿನ ಭೂದಾಖಲೆಗಳ ಸಹಾಯಕ ನಿರ್ದೇಶಕರು, ಶ್ರೀ ಎಸ್.ಬಿ. ಬ್ಯಾಕೋಡಿ, ತಪಾಸಕರು ಮತ್ತು ಶ್ರೀ ಎಸ್.ಎಸ್. ಗಾಣಗಿ, ಪ್ರಥಮ ದರ್ಜೆ ಸಹಾಯಕರು ಇವರು ಭೂದಾಖಲೆಗಳ ಸಹಾಯಕ ನಿರ್ದೇಶಕರು, ನಗರಮಾಪನ ಕಛೇರಿ, ಬೆಳಗಾವಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, 1999–2000ನೇ ಸಾಲಿನ 23 ಉತಾರ ಅರ್ಜಿಗಳನ್ನು ವಿಲೇ ಮಾಡದೇ ಬಾಕಿ ಉಳಿಸಿಕೊಂಡಿರುವುದು, ಸರ್ಕಾರಿ ಹಣವನ್ನು ಖಜಾನೆಗೆ ಜಮಾ ಮಾಡದೇ ಕಛೇರಿಯಲ್ಲಿಯೇ ನಗದು ಉಳಿಸಿಕೊಂಡು, ತಾತ್ಕಾಲಿಕ ದುರುಪಯೋಗವಾಗಲು ಕಾರಣರಾಗಿದ್ದು, ಈ ಅಧಿಕಾರಿ ನೌಕರರು ಕರ್ನಾಟಕ ಆರ್ಥಿಕ ಸಂಹಿತೆಯ ಅನುಚ್ಛೇಧ 3, 4 ಮತ್ತು 329ರಲ್ಲಿನ ಸೂಚನೆಗಳನ್ನು ಉಲ್ಲಂಘಿಸಿ, ಕರ್ತವ್ಯಲೋಪ ಎಸಗಿರುವ ಹಿನ್ನೆಲೆಯಲ್ಲಿ ಮೇಲೆ (1)ರಲ್ಲಿ ಓದಲಾದ ದಿನಾಂಕ 27–4–2006ರ ಸರ್ಕಾರಿ ಆದೇಶದಲ್ಲಿ ಇವರ ವಿರುದ್ಧ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 13ರ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಜಂಟಿ ಇಲಾಖಾ ವಿಚಾರಣೆಯನ್ನು ಸದರಿ ನಿಯಮಾವಳಿಗಳ ನಿಯಮ 11 ಮತ್ತು 11(ಎ) ಅಥವಾ 12ರಲ್ಲಿನ ವಿಧಿವಿಧಾನಗಳನ್ನನುಸರಿಸಿ ನಡೆಸಲು ಅನುಮತಿ ನೀಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ದಿನಾಂಕ 25–5–2006ರಲ್ಲಿ ಆರೋಪಿತರುಗಳಿಗೆ ಆರೋಪ ಪಟ್ಟಿ ಅನುಬಂಧ–1ರಿಂದ 4 ಸೇರಿ ಕಾರಣ ಕೇಳಿ ನೋಟೀಸನ್ನು ಆಯುಕ್ತರು, ಭೂಮಾಪನ ಇಲಾಖೆರವರು ಹೊರಡಿಸಿರುತ್ತಾರೆ. ಸದರಿ ನೋಟೀಸುಗಳಿಗೆ ಆರೋಪಿತರುಗಳಾದ ಶ್ರೀ ಜಿ.ಎಸ್. ಗಡದವರ, ಭೂಮಾಪನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು ಮೇಲೆ (3)ರಲ್ಲಿ ಓದಲಾದ ದಿನಾಂಕ 7–6–2006ರ ಲಿಖಿತ ಹೇಳಿಕೆಯಲ್ಲಿ ತಮ್ಮ ಮೇಲೆ ಮಾಡಿರುವ ದೋಷಾರೋಪಣೆಗಳನ್ನು ಸಂಪೂರ್ಣವಾಗಿ ನಿರಾಕರಿಸಿರುತ್ತಾರೆ ಹಾಗೂ ವಿಚಾರಣೆಯನ್ನು ಕೈಬಿಡಬೇಕೆಂದು ಕೋರಿದ್ದಾರೆ. ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತ ತಪಾಸಕರುರವರು ದಿ: 14–6–2006ರಂದು ಲಿಖಿತ ಉತ್ತರ ನೀಡಿ ತಾವು ಯಾವುದೇ ಕರ್ತವ್ಯ ಲೋಪವೆಸಗಿರುವುದಿಲ್ಲ ಎಂದು ತಮ್ಮ ಮೇಲಿನ ಆಪಾದನೆಗಳನ್ನು ನಿರಾಕರಿಸುತ್ತಾ, ಇಲಾಖಾ ವಿಚಾರಣೆಯಿಂದ ಕೈಬಿಡಲು ಕೋರಿದ್ದಾರೆ. ಶ್ರೀ ಎಸ್.ಎಸ್. ಗಾಣಗಿ, ಪ್ರ.ದ.ಸ. ರವರು ತಮ್ಮ ದಿ: 23–6–2006ರ ತಮ್ಮ ಲಿಖಿತ ಉತ್ತರದಲ್ಲಿ ನಕಲು ಅರ್ಜಿಗಳು ತನ್ನ ಹಂತದಲ್ಲಿ ಕಳೆದುಹೋಗಿರುವುದಿಲ್ಲ ನನ್ನ ಕರ್ತವ್ಯ ನಿರ್ವಹಣೆಯಲ್ಲಿ ಯಾವುದೇ ನಿರ್ಲಕ್ಷತೆ ತೋರಿರುವುದಿಲ್ಲ. ಖಜಾಣೆಗೆ ಹಣ ಭರಣೆ ಮಾಡಲು ಯಾವುದೇ ವಿಳಂಬವಾಗಿರುವುದಿಲ್ಲ. ಆದುದರಿಂದ ತಮ್ಮ ಮೇಲೆ ಆರೋಪಗಳು ಸತ್ಯಕ್ಕೆ ದೂರವಾಗಿರುತ್ತದೆ ಎಂದು ತಮ್ಮನ್ನು ಇಲಾಖಾ ವಿಚಾರಣೆಯಿಂದ ಕೈಬಿಡಲು ಕೋರಿದ್ದಾರೆ.

ಈ ಆರೋಪಗಳ ಸಂಬಂಧ ಅವರುಗಳಿಗೆ ದೋಷಾರೋಪಣೆಗಳ ಬಗ್ಗೆ ಸತ್ಯಾಸತ್ಯತೆಗಳನ್ನು ಕಂಡುಕೊಳ್ಳಲು ಮೇಲೆ (4)ರಲ್ಲಿ ಓದಲಾದ ದಿ: 13–9–2006ರ ಆದೇಶದಲ್ಲಿ ಭೂದಾಖಲೆಗಳ ಜಂಟಿ ನಿರ್ದೇಶಕರು (ವಿಚಾರಣೆ ಮತ್ತು ತನಿಖೆ) ರವರನ್ನು ವಿಚಾರಣಾಧಿಕಾರಿಯಾಗಿಯು ಹಾಗೂ ತಾಂತ್ರಿಕ ಸಹಾಯಕರು ಹಾಗೂ ಭೂದಾಖಲೆಗಳ ಉಪ ನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಶಿವಮೊಗ್ಗರವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (5)ರಲ್ಲಿ ಓದಲಾದ ದಿ: 10–4–2007ರ ವಿಚಾರಣಾ ವರದಿಯನ್ನು ಆಯುಕ್ತರಿಗೆ ಸಲ್ಲಿಸಿ.

ಶ್ರೀ ಜಿ.ಎಸ್. ಗಡದವರ್, ಭೂ.ಉ.ನಿ.ರವರ ಮೇಲಿನ 3 ಆರೋಪಗಳ ಪೈಕಿ 2 ಆರೋಪಗಳು ಭಾಗಶಃ ಸಾಭೀತಾಗಿದ್ದು, ಶ್ರೀ ಎಸ್.ಬಿ. ಬ್ಯಾಕೋಡಿ, ನಿವೃತ್ತ ತಪಾಸಕರ ಮೇಲಿನ 4 ಆರೋಪಗಳ ಪೈಕಿ 2 ಆರೋಪಗಳು ಸಾಬೀತಾಗಿರುತ್ತದೆ ಹಾಗೂ ಶ್ರೀ ಎಸ್.ಎಸ್. ಗಾಣಗಿ ಇವರ ಮೇಲಿನ 3 ಆರೋಪಗಳ ಪೈಕಿ 2 ಆರೋಪಗಳು ಸಾಬೀತಾಗಿರುತ್ತದೆಂದು ವರದಿ ನೀಡಿರುತ್ತಾರೆ. ಈ ಬಗ್ಗೆ ಮೇಲೆ ಓದಲಾದ (6)ರ ದಿ: 14–6–2007ರ ಆರೋಪಿತರುಗಳಿಗೆ 2ನೇ ಕಾರಣ ಕೇಳಿ ನೋಟೀಸು ನೀಡಲಾಗಿತ್ತು. ಸದರಿ 2ನೇ ಕಾರಣ ಕೇಳಿ ನೋಟೀಸಿಗೆ ಮೇಲೆ (7)ರಲ್ಲಿ ಓದಲಾದ ದಿ: 20–6–2007ರ ಹೇಳಿಕೆಯಲ್ಲಿ ಶ್ರೀ ಜಿ.ಎಸ್. ಗಡದವರ್ ವಿಚಾರಣಾ ವರದಿಯನ್ನು ಒಪ್ಪದೆ ತಮ್ಮ ಮೇಲಿನ ದೋಷರೋಪಣೆಗಳಿಂದ ಮುಕ್ತಗೊಳಿಸಬೇಕೆಂದು ಕೋರಿದ್ದಾರೆ.

ಶ್ರೀ ಎಸ್.ಬಿ. ಬ್ಯಾಕೋಡಿ ರವರು ಮೇಲೆ (8)ರಲ್ಲಿ ಓದಲಾದ ದಿ: 23–6–2007ರ ಲಿಖಿತ ಹೇಳಿಕೆಯಲ್ಲಿ ತಮ್ಮ ವಿರುದ್ಧ ಸಾಕ್ಷಿದಾರರು ಯಾವುದೇ ನಿಖರವಾದ ಸಾಕ್ಷಿ ಹೇಳಿರುವುದಿಲ್ಲ. ತಾವು ನಿಷ್ಠೆಯಿಂದ ಕೆಲಸ ಮಾಡಿದ್ದು, ತಮ್ಮನ್ನು ದೋಷಮುಕ್ತರನ್ನಾಗಿ ಮಾಡಬೇಕೆಂದು ಕೋರುತ್ತಾ, ವಿಚಾರಣಾ ವರದಿಯನ್ನು ಒಪ್ಪಿರುವುದಿಲ್ಲ. ಶ್ರೀ ಗಾಣಗಿ, ಪ್ರ.ದ.ಸ. ರವರು ಮೇಲೆ (9)ರಲ್ಲಿ ಓದಲಾದ ದಿ: 28–6–2007ರ ಲಿಖಿತ ಹೇಳಿಕೆಯಲ್ಲಿ ಆರೋಪ 1 ಮತ್ತು 2ಕ್ಕೆ ಈಗಾಗಲೇ ವಿಚಾರಣೆಯಲ್ಲಿ ನೀಡಿದ ಹೇಳಿಕೆಗೆ ಬದ್ಧನಾಗಿರುತ್ತೇನೆ. ಆರೋಪ 3ಕ್ಕೆ ಸಂಬಂಧಿಸಿದಂತೆ ವಿಚಾರಣಾ ವರದಿಯ ಅಂಶಗಳನ್ನು ಒಪ್ಪುತ್ತೇನೆ. ತಮಗೆ ಯಾವುದೇ ದಂಡನೆಯನ್ನು ವಿಧಿಸಬಾರದೆಂದು ಕೋರಿರುತ್ತಾರೆ.

ವಿಚಾರಣಾ ವರದಿ ಮತ್ತು ಲಭ್ಯವಿರುವ ಸಾಕ್ಷ್ಯಾಧಾರಗಳನ್ನು ಹಾಗೂ ಆರೋಪಿತರು 2ನೇ ಕಾರಣ ಕೇಳುವ ನೋಟೀಸ್‌ಗೆ ನೀಡಿರುವ ಹೇಳಿಕೆಗಳನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಅವರುಗಳ ಆರೋಪಗಳನ್ನು ಅಲ್ಲಗೆಳೆಯುವಂತೆ ಯಾವುದೇ ಸಾಕ್ಷ್ಯಪುರಾವೆಗಳನ್ನು ಒದಗಿಸಿರುವುದಿಲ್ಲವಾದ್ದರಿಂದ, ವಿಚಾರಣೆಯನ್ನು ವಿಚಾರಣಾಧಿಕಾರಿಗಳು ನಿಯಮಾನುಸಾರ ನಡೆಸಿರುವುದನ್ನು ಮನಗಂಡು ಹಾಗೂ ವಿಚಾರಣಾ ವರದಿಯ ಬಗ್ಗೆ ಆರೋಪಿತರುಗಳು ನೀಡಿರುವ ಹೇಳಿಕೆಯನ್ನು ತಿರಸ್ಕರಿಸಿ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಶ್ರೀ ಎಸ್.ಬಿ. ಬ್ಯಾಕೋಡಿ, ತಪಾಸಕರು ಈಗಾಗಲೇ ದಿ: 31–5–2006 ರಂದು ನಿವೃತ್ತಿ ಹೊಂದಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 214(1)(ಎ)ರನ್ವಯ ಕ್ರಮ ಜರುಗಿಸಬೇಕಾಗಿರುವುದರಿಂದ ಈ ಬಗ್ಗೆ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿ ಪಡೆದು ಪ್ರತ್ಯೇಕವಾಗಿ ಅಂತಿಮ ಆದೇಶ ಹೊರಡಿಸಲಾಗುವುದು. ಉಳಿದಂತೆ ಹಾಲಿ ಸೇವೆಯಲ್ಲಿರುವ ಅಧಿಕಾರಿ ನೌಕರರ ಅಂದರೆ ಶ್ರೀ ಜಿ.ಎಸ್. ಗಡದವರ್, ಭೂಮಾಪನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಕಾರವಾರ ಮತ್ತು ಶ್ರೀ ಎಸ್.ಎಸ್. ಗಾಣಗಿ, ಪ್ರಥಮ ದರ್ಜೆ ಸಹಾಯಕರು, ತಹಶೀಲ್ದಾರ್ ಕಛೇರಿ, ಬೆಳಗಾಂ ರವರುಗಳ ವಿರುದ್ಧ ಸಾಬೀತಾದ ಆರೋಪಗಳ ಗಂಭೀರತೆಗನುಗುಣವಾಗಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 3 ಭೂದಾಸೇ (3) 2008, ಬೆಂಗಳೂರು, ದಿನಾಂಕ: 12ನೇ ಫೆಬ್ರವರಿ 2008.**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಶ್ರೀ ಜಿ.ಎಸ್. ಗಡದವರ್, ಭೂಮಾಪನ ತಾಂತ್ರಿಕ ಸಹಾಯಕರು ಹಾಗೂ ಪದನಿಮಿತ್ತ ಭೂದಾಖಲೆಗಳ ಉಪ ನಿರ್ದೇಶಕರು, ಜಿಲ್ಲಾಧಿಕಾರಿಗಳ ಕಛೇರಿ, ಕಾರವಾರ ಮತ್ತು ಶ್ರೀ ಎಸ್.ಎಸ್. ಗಾಣಗಿ, ಪ್ರಥಮ ದರ್ಜೆ ಸಹಾಯಕರು, ತಹಸೀಲ್ದಾರ್ ಕಛೇರಿ, ಬೆಳಗಾಂ ರವರುಗಳಿಗೆ ಹಾಲಿ ಪಡೆಯುತ್ತಿರುವ ವೇತನ ಶ್ರೇಣಿಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 8(iii)ರಡಿ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಮಾತ್ರ 3 ವರ್ಷಗಳ ಅವಧಿಗೆ ಸಂಚಿತ ಪರಿಣಾಮ ಬೀರದಂತೆ ತಕ್ಷಣದಿಂದ ಜಾರಿಗೆ ಬರುವಂತೆ ತಡೆಹಿಡಿಯುವ ದಂಡನೆ ವಿಧಿಸಿ ಆದೇಶಿಸಿದೆ.

ಭಾರತ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 308

**ಎಸ್.ಬಿ. ಸಸಾಲಟ್ಟಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂಮಾಪನ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಇದನ್ನು ಉನ್ನತೀಕರಿಸುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ವಿಮ್ಸ್/ಲೆಕ್ಕಪತ್ರ/2007–08/54, ದಿನಾಂಕ 17–8–2007.

**ಪ್ರಸ್ತಾವನೆ :**

ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಇದು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರಡಿ ನೋಂದಾಯಿತವಾಗಿರುವ ಒಂದು ಸ್ವಾಯತ್ತ ಸಂಸ್ಥೆ, ಇದು ಒಂದು ಹಳೆಯ ಮತ್ತು ಪ್ರತಿಷ್ಠಿತ ಸಂಸ್ಥೆ ಇದರ ಕ್ಯಾಂಪಸ್ 198 ಎಕರೆಗಳು ವ್ಯಾಪಿಸಿದ್ದು ಅಭಿವೃದ್ಧಿ ಮತ್ತು ವಿಸ್ತರಣೆಗೆ ವಿಪುಲ ಅವಕಾಶವಿರುತ್ತದೆ. ಇದರಲ್ಲಿ ವಾಷಿಕ 100 ಸೀಟುಗಳ ಸ್ನಾತಕ (ಎಂಬಿಬಿಎಸ್) ದಾಖಲಾತಿ ಸಾಮರ್ಥ್ಯವಿರುತ್ತದೆ.

ನಿರ್ದೇಶಕರು, ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿರವರು ಮೇಲೆ ಓದಲಾದ ತಮ್ಮ ಪತ್ರದಲ್ಲಿ ಸಂಸ್ಥೆಯ ವಾರ್ಷಿಕ ಸ್ನಾತಕ ಸೀಟುಗಳ ದಾಖಲಾತಿ ಸಾಮರ್ಥ್ಯವನ್ನು 100 ರಿಂದ 150ಕ್ಕೆ ಹೆಚ್ಚಿಸಲು ರೂ. 25.00 ಕೋಟಿಗಳ ವೆಚ್ಚದಲ್ಲಿ ಮೇಲ್ದರ್ಜೆಗೇರಿಸಲು ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಇದರ ವಾರ್ಷಿಕ ಸ್ನಾತಕ ದಾಖಲಾತಿ ಸಾಮರ್ಥ್ಯವನ್ನು 100 ಸೀಟುಗಳಿಂದ 150ಕ್ಕೆ ಹೆಚ್ಚಿಸಲು ಸಂಸ್ಥೆಯನ್ನು ರೂ. 25.00 ಕೋಟಿಗಳ ವೆಚ್ಚದಲ್ಲಿ ಮೇಲ್ದರ್ಜೆಗೇರಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 264 ಎಂಪಿಎಸ್ 2007, ಬೆಂಗಳೂರು, ದಿನಾಂಕ: 29ನೇ ಮಾರ್ಚ್ 2008.**

ವಿಜಯನಗರ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಬಳ್ಳಾರಿ ಇದರ ವಾರ್ಷಿಕ ಸ್ನಾತಕ (ಎಂಬಿಬಿಎಸ್) ದಾಖಲಾತಿ ಸಾಮರ್ಥ್ಯವನ್ನು 100 (ಒಂದು ನೂರು ಮಾತ್ರ) ಸೀಟುಗಳಿಂದ 150 (ಒಂದು ನೂರ ಐವತ್ತು ಮಾತ್ರ) ಸೀಟುಗಳಿಗೆ ಹೆಚ್ಚಿಸಲು ಸಂಸ್ಥೆಯನು ರೂ. 25.00 (ರೂಪಾಯಿ ಇಪ್ಪತ್ತೈದು ಕೋಟಿ ಮಾತ್ರ) ಕೋಟಿಗಳ ವೆಚ್ಚದಲ್ಲಿ ಮೇಲ್ದರ್ಜೆಗೇರಿಸಲು ಮತ್ತು ಹಣವನ್ನು ಬಿಡುಗಡೆ ಮಾಡಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಯೋಜನಾ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಪಿಡಿ 120 ಎಂ & ಇ 2007, ದಿನಾಂಕ 31–7–2007 ಮತ್ತು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 2318 ವೆಚ್ಚ:5/07, ದಿನಾಂಕ 9–1–2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 582

**ವಿ. ಶ್ರೀರಾಮರೆಡ್ಡಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

**ಯುವಜನಸೇವಾ ಸಚಿವಾಲಯ**

**ವಿಷಯ :** ದಿನಾಂಕ 11–5–2008 ರಿಂದ 18–5–2008ರವರೆಗೆ ನಡೆಯಲಿರುವ ಪ್ರಥಮ ರಾಷ್ಟ್ರೀಯ ಯುವ ಕ್ರೀಡಾಕೂಟಕ್ಕೆ ಸಂಬಂಧಿಸಿದಂತೆ ಉಪ ಸಮಿತಿಗಳನ್ನು ರಚಿಸುವ ಕುರಿತು ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 89 ಯುಸೇಕ್ರೀ 2007, ದಿನಾಂಕ 5–2–2008.
2. ಸರ್ಕಾರಿ ಆದೇಶ ಸಂಖ್ಯೆ ಯುಸೇಇ 89 ಯುಸೇಕ್ರೀ 2007(ಭಾ), ದಿನಾಂಕ 5–2–2007.
3. ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 43 ಯುಸೇಕ್ರೀ 2008, ದಿನಾಂಕ 28–2–2008.
4. ಯುವಜನ ಸೇವಾ ಮತ್ತು ಕ್ರೀಡಾ ಆಯುಕ್ತರುರವರ ಪತ್ರ ಸಂಖ್ಯೆ: ಸಿವೈಎಸ್ಎಸ್/ಜೆಡಿಎಸ್/ಎನ್‌ವೈಜಿ–2008/07–08, ದಿನಾಂಕ 21/23–2–2008.

**ಪ್ರಸ್ತಾವನೆ :**

ಮೇಲೆ ಓದಲಾದ ಉಲ್ಲೇಖ (1)ರ ಸರ್ಕಾರಿ ಆದೇಶದಲ್ಲಿ, 2008ನೇ ಸಾಲಿನಲ್ಲಿ ಬೆಂಗಳೂರಿನಲ್ಲಿ ನಡೆಯಲಿರುವ ಪ್ರಥಮ ರಾಷ್ಟ್ರೀಯ ಯುವ ಕ್ರೀಡಾಕೂಟ ನಡೆಸುವುದಕ್ಕೆ ಸಂಬಂಧಿಸಿದಂತೆ ಮಾನ್ಯ ಘನತೆವೆತ್ತ ರಾಜ್ಯಪಾಲರ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿಯನ್ನು ರಚಿಸಲಾಗಿದೆ ಮತ್ತು ಈ ಕ್ರೀಡಾಕೂಟವನ್ನು ಸುವ್ಯವಸ್ಥಿತವಾಗಿ ನಡೆಸುವ ಸಲುವಾಗಿ ಗೇಮ್ಸ್ ಟೆಕ್ನಿಕಲ್ ಕಾಂಡಕ್ಟ್ ಸಮಿತಿಯನ್ನು ಉಲ್ಲೇಖ (2)ರ ಸರ್ಕಾರದ ಆದೇಶದಲ್ಲಿ ರಚಿಸಲಾಗಿದೆ. ಯುವ ಕ್ರೀಡಾಕೂಟವನ್ನು ಸಂಘಟಿಸುವ ಸಂಬಂಧ Best Brand Imagesನ್ನು ಅಳವಡಿಸಿಕೊಂಡು ಸಂಘಟಿಸಲು ಮತ್ತು ಪ್ರಾಯೋಜಕರಿಂದ ಸಂಪನ್ಮೂಲ ಕ್ರೋಢೀಕರಣದ ಮತ್ತು ಕ್ರೀಡಾಕೂಟ ಸಂಘಟನೆಗೆ ಪೂರ್ವಸಿದ್ಧತೆ ಕೈಗೊಳ್ಳಲು ಉಲ್ಲೇಖ (3)ರ ಸರ್ಕಾರಿ ಆದೇಶ ಹೊರಡಿಸಲಾಗಿದೆ.

ಆಯುಕ್ತರು, ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆ ಇವರು ಮೇಲೆ ಓದಲಾದ ಉಲ್ಲೇಖ (4)ರ ಪ್ರಸ್ತಾವನೆಯಲ್ಲಿ, ಬೆಂಗಳೂರಿನಲ್ಲಿ ಪ್ರಥಮ ರಾಷ್ಟ್ರೀಯ ಯುವ ಕ್ರೀಡಾಕೂಟವನ್ನು ದಿನಾಂಕ 11–5–2008 ರಿಂದ 18–5–2007ರವರೆಗೆ ಸಂಘಟಿಸುವ ಸಂಬಂಧ ದಿನಾಂಕ 21–2–2008ರಂದು ಘನತೆವೆತ್ತ ರಾಜ್ಯಪಾಲರ ಅಧ್ಯಕ್ಷತೆಯಲ್ಲಿ ನಡೆದ ಉನ್ನತ ಮಟ್ಟದ ಸಮಿತಿಯ ತೀರ್ಮಾನದಂತೆ ಈ ಕೆಳಕಂಡ ಉಪ ಸಮಿತಿಗಳನ್ನು ಸರ್ಕಾರಿ ಅಧಿಕಾರಿಗಳು/ ಅಧಿಕಾರೇತರರು ಮತ್ತು ರಾಜ್ಯ ಕ್ರೀಡಾಕೂಟದ ಕಛೇರಿಯ ಪದಾಧಿಕಾರಿಗಳನ್ನೊಳಗೊಂಡಂತೆ ಮತ್ತು ಅವುಗಳ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ನಿಗಧಿಪಡಿಸಿ, ರಚಿಸಿ ಸರ್ಕಾರಿ ಆದೇಶವನ್ನು ಹೊರಡಿಸಲು ಕೋರಿರುತ್ತಾರೆ.

1) ಫೈನಾನ್ಸ್ ಕಮಿಟಿ
2) ಹೌಸಿಂಗ್ ಅಂಡ್ ಅಕಾಮಡೇಷನ್ ಕಮಿಟಿ
3) ಕೇಟರಿಂಗ್ ಕಮಿಟಿ
4) ಟ್ರಾನ್ಸ್‌ಪೋರ್ಟ್ ಕಮಿಟಿ
5) ಮೆಡಿಕಲ್ ಅಂಡ್ ಹೆಲ್ತ್ ಕಮಿಟಿ
6) ರಿಸೆಪ್ಷನ್ ಕಮಿಟಿ
7) ಪಬ್ಲಿಸಿಟಿ ಕಮಿಟಿ
8) ಕಲ್ಚರಲ್ ಕಮಿಟಿ
9) ಸೆಕ್ಯೂರಿಟಿ ಕಮಿಟಿ ಮತ್ತು
10) ವಾಲೆಂಟೀಯರ್ಸ್ ಕಮಿಟಿ

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 47 ಯುಸೇಕ್ರೀ 2008, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2008**.

ಪ್ರಥಮ ರಾಷ್ಟ್ರೀಯ ಯುವ ಕ್ರೀಡಾಕೂಟವನ್ನು ದಿನಾಂಕ 11–5–2008 ರಿಂದ 18–5–2008ರ ವರೆಗೆ ಬೆಂಗಳೂರಿನಲ್ಲಿ ಯಶಸ್ವಿಯಾಗಿ ನಡೆಸಲು ಈ ಕೆಳಕಂಡ ಉಪ ಸಮಿತಿಗಳನ್ನು ಸರ್ಕಾರಿ ಅಧಿಕಾರಿಗಳು/ ಅಧಿಕಾರೇತರರು ಮತ್ತು ರಾಜ್ಯ ಕ್ರೀಡಾಕೂಟದ ಕಛೇರಿಯ ಪದಾಧಿಕಾರಿಗಳನ್ನೊಳಗೊಂಡಂತೆ ಹಾಗೂ ಅವುಗಳ ಕರ್ತವ್ಯ ಮತ್ತು ಜವಾಬ್ದಾರಿಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧ 1 ರಿಂದ 10ರಲ್ಲಿ ಸೂಚಿಸಿರುವಂತೆ ರಚಿಸಿ ಹೊರಡಿಸಲಾಗಿದೆ.

1) ಫೈನಾನ್ಸ್ ಕಮಿಟಿ
2) ಹೌಸಿಂಗ್ ಅಂಡ್ ಅಕಾಮಡೇಷನ್ ಕಮಿಟಿ
3) ಕೇಟರಿಂಗ್ ಕಮಿಟಿ
4) ಟ್ರಾನ್ಸ್‌ಪೋರ್ಟ್ ಕಮಿಟಿ
5) ಮೆಡಿಕಲ್ ಅಂಡ್ ಹೆಲ್ತ್ ಕಮಿಟಿ
6) ರಿಸೆಪ್ಷನ್ ಕಮಿಟಿ
7) ಪಬ್ಲಿಸಿಟಿ ಕಮಿಟಿ
8) ಕಲ್ಚರಲ್ ಕಮಿಟಿ
9) ಸೆಕ್ಯೂರಿಟಿ ಕಮಿಟಿ ಮತ್ತು
10) ವಾಲೆಂಟೀಯರ್ಸ್ ಕಮಿಟಿ

2008ನೇ ಸಾಲಿನ ಪ್ರಥಮ ರಾಷ್ಟ್ರೀಯ ಯುವ ಕ್ರೀಡಾಕೂಟ ಸಂಘಟಿಸಿ ಅನುಷ್ಠಾನಗೊಳಿಸುವ ಈ ಯೋಜನಾ ಕಾರ್ಯಕ್ರಮಕ್ಕೆ ತಗಲುವ ಹಣಕಾಸಿನ ಖರ್ಚು ವೆಚ್ಚಗಳ ಕುರಿತು ಹಾಲಿ ಜಾರಿಯಲ್ಲಿರುವ ಕರ್ನಾಟಕ ಪಾರದರ್ಶಕ ಅಧಿನಿಯಮದನ್ವಯ ಪಾಲಿಸತಕ್ಕದ್ದು.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕಮಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಯುವಜನಸೇವಾ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 47 ಯುಸೇಕ್ರೀ 2008, ಬೆಂಗಳೂರು ದಿನಾಂಕ 1–3–2008ಕ್ಕೆ**

**ಅನುಬಂಧ–1**

**FINANCE COMMITTEE**

| Sl. No. | Name and Designation | Position |
|---|---|---|
| 1 | Chief Secretary, Govt. of Karnataka | Chairman |
| 2 | Principal Secretary, Finance Department | Vice Chairman |
| 3 | Principal Secretary, Industries and Commerce | Member |
| 4 | Principal Secretary, Urban Development | Member |
| 5 | Secretary, Youth Services Department | Member |
| 6 | Commissioner, BDA | Member |
| 7 | Commissioner, Bruhath Bangalore Mahanagara Palike | Member |
| 8 | Commissioner, Excise | Member |
| 9 | Commissioner, Commercial Tax | Member |
| 10 | Commissioner, Information and Tourism | Member |
| 11 | Chief Executive Officer and Managing Director Karnataka Industries Area Development Board | Member |
| 12 | Managing Director, KPTCL | Member |
| 13 | Managing Director, Keonics | Member |
| 14 | Sri K. Govindaraj, President, Karnataka Olympic Association | Member |
| 15 | Commissioner, Dept. of Youth Services and Sports | Member-Secretary |

**Duties and Responsibilities:**

1. According approval for the budgetary requirments of various sub-committees.
2. Mobilization and allocation of funds.
3. Approval of estimates and expenditure.
4. Granting of approval of purchases.
5. Finalization of accounting rules and framework.
6. Arrangements for internal audit and concurrent audit.
7. Aiming of clear guidelines for incurring expenditure and accountability.

**B. KAMALAMMA**

Under Secretary to Government,

Youth Services Department.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 47 ಯುಸೇಕ್ರೀ 2008, ಬೆಂಗಳೂರು ದಿನಾಂಕ 1–3–2008ಕ್ಕೆ**

**ಅನುಬಂಧ–2**

**HOUSING AND ACCOMMODATION COMMITTEE**

| Sl. No. | Name and Designation | Position |
|---|---|---|
| 1 | Commissioner, Bruhath Bangaluru Mahanagara Palike | Chairman |
| 2 | Commissioner, Dept. of Youth Services and Sports | Member |

| Sl. No. | Name and Designation | Position |
|---|---|---|
| 3 | Deputy Commissioner of Police, Traffic | Member |
| 4 | Deputy Commissioner of Police, Central | Member |
| 5 | Chief Engineer, BWSSB | Member |
| 6 | Deputy Inspector General, Fire Services | Member |
| 7 | Executive Engineer, BESCOM | Member |
| 8 | Joint Director, Collegiate Education | Member |
| 9 | Secretary Century Club | Member |
| 10 | President and Secretary, Hotel Association | Member |
| 11 | Sri R.K. Shetty KOA | Member |
| 12 | Sri Sudhir, KOA | Member |
| 13 | Sri Vijaya Raghavan, KOA | Member |
| 14 | Sri K.C. Nagaraj, KOA | Member |
| 15 | Deputy Commissioner, BBMP | Member |
| 16 | Sri Praveen Kumar, International Sportsperson | Member |
| 17 | Sri R.L. Patil, Joint Director (Admn.) Department of Youth Services & sports | Member-Secretary |

**Duties and Responsibilities:**

1. Providing accommodation to VVIP, VIP, Technical Officials, Managers and sportspersons.
2. Co-ordication with Health Committee, Reception Committee, Cultural Committee and Security Committee.

**B. KAMALAMMA**
Under Secretary to Government,
Youth Services Department.

**ಸರ್ಕಾರಿ ಆದೇಶ ಸಂಖ್ಯೆ: ಯುಸೇಇ 47 ಯುಸೇಕ್ರೀ 2008, ಬೆಂಗಳೂರು ದಿನಾಂಕ 1–3–2008ಕ್ಕೆ**
**ಅನುಬಂಧ–3**

**CATERING COMMITTEE**

| Sl. No. | Name and Designation | Position |
|---|---|---|
| 1 | Principal Secretary, Food and Civil Supplies | Chairman |
| 2 | Commissioner, Food and Civil Supplies | Member |
| 3 | Commissioner, Dept. of Youth Services and Sports | Member |
| 4 | Chief Health Officer, BBMP | Member |
| 5 | Deputy Inspector General, KSRP | Member |
| 6 | Deputy Commissioner of Police, South | Member |
| 7 | Sri Rajesh Jagadale, KOA | Member |
| 8 | Sri R. Prakash, KOA | Member |
| 9 | Sri Anantharaj, KOA | Member |
| 10 | Sri Mohan Raj, KOA | Member |
| 11 | Sri Ashok Kumar, Dy. Director, Dept. of Youth Services & Sports | Member |
| 12 | Sri Kenneth Powell, International Sportsperson | Member |
| 13 | Smt. Manjula, Asst. Director, Dept. of Youth Services & Sports, Mandya | Member-Secretary |

**Duties and Responsibilities:**

1. Providing Food, Water and Coupons to sportspersons, Valunteers, Technical officials.
2. Preparing Menu list.

ಮೇಲ್ಕಾಣಿಸಿದ ಅಂಶಗಳಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ, ಅಧಿಸೂಚನೆ ಸಂ: ಆರ್‌ಡಿ 102 ಎಎಸ್‌ಡಿ 2007, ದಿನಾಂಕ 24–12–2007ರಲ್ಲಿ ಸಕ್ರಮಗೊಳಿಸಲಾಗಿರುವ ತಹಶೀಲ್ದಾರರಾದ ಶ್ರೀ ಬಿ.ಜಿ. ರಾಠೋಡ್ (ಎಸ್.ಸಿ.) –4940, ಶ್ರೀ ಎಸ್. ದೇವಯ್ಯ (ಎಸ್.ಸಿ)–4972, ಶ್ರೀ ಕೃಷ್ಣಪ್ಪ ಹೊಸಮನಿ (ಎಸ್.ಸಿ) –5062, ಶ್ರೀ ಶಿವರಾಜ್ (ಎಸ್.ಸಿ.)–5067 ಹಾಗೂ ಶ್ರೀ ಟಿ.ಎಲ್. ನಾಯಕ್ (ಎಸ್.ಸಿ.)–5083 ಇವರ ಮಟ್ಟಿಗೆ ಸಕ್ರಮಾತಿ ಆದೇಶವನ್ನು ಹಿಂಪಡೆಯಬೇಕಾಗುತ್ತದೆ. ಅದೇ ರೀತಿ ಅಧಿಸೂಚನೆ ಸಂ: ಆರ್‌ಡಿ 308 ಎಎಸ್‌ಡಿ 2007, ದಿನಾಂಕ 24–12–2007ರಲ್ಲಿ ಗ್ರೇಡ್–II ತಹಶೀಲ್ದಾರ್ ಹುದ್ದೆಯಿಂದ ಗ್ರೇಡ್–I ತಹಶೀಲ್ದಾರ್ ಹುದ್ದೆಗೆ ಪದೋನ್ನತಿ ನೀಡಲಾಗಿರುವ ಕ್ರ.ಸಂ. 67ರಲ್ಲಿನ ಶ್ರೀ ಕೃಷ್ಣಪ್ಪ ಹೊಸಮನಿ (ಎಸ್.ಸಿ.) ಇವರ ಪದೋನ್ನತಿ ಆದೇಶವನ್ನು ಸಹಾ ಇವರ ಮಟ್ಟಿಗೆ ಹಿಂಪಡೆಯಬೇಕಾಗುತ್ತದೆ. ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 69 ಎಎಸ್‌ಡಿ 2008, ಬೆಂಗಳೂರು, ದಿನಾಂಕ: 2ನೇ ಜೂನ್ 2008**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅಧಿಸೂಚನೆ ಸಂ: ಆರ್‌ಡಿ 102 ಎಎಸ್‌ಡಿ 2007, ದಿನಾಂಕ 24–12–2007ರಲ್ಲಿ ತಹಶೀಲ್ದಾರ್ ಗ್ರೇಡ್–II ಹುದ್ದೆಯಲ್ಲಿ ಸಕ್ರಮಗೊಳಿಸಲಾಗಿರುವ ಶ್ರೀ ಬಿ.ಜಿ. ರಾಠೋಡ್ (ಎಸ್.ಸಿ.)–4940, ಶ್ರೀ ಎಸ್. ದೇವಯ್ಯ (ಎಸ್.ಸಿ)–4972, ಶ್ರೀ ಕೃಷ್ಣಪ್ಪ ಹೊಸಮನಿ (ಎಸ್.ಸಿ.)–5062, ಶ್ರೀ ಶಿವರಾಜ್ (ಎಸ್.ಸಿ)–5067 ಹಾಗೂ ಶ್ರೀ ಟಿ.ಎಲ್. ನಾಯಕ್ (ಎಸ್.ಸಿ.)–5083 ಇವರ ಸಕ್ರಮಾತಿ ಆದೇಶವನ್ನು ಇವರ ಮಟ್ಟಿಗೆ ಹಿಂಪಡೆಯಲಾಗಿದೆ ಹಾಗೂ ಅಧಿಸೂಚನೆ ಸಂ: ಆರ್‌ಡಿ 308 ಎಎಸ್‌ಡಿ 2007, ದಿನಾಂಕ 24–12–2007ರಲ್ಲಿ ತಹಶೀಲ್ದಾರ್ ಗ್ರೇಡ್–I ಹುದ್ದೆಗೆ ಪದೋನ್ನತಿ ನೀಡಲಾಗಿರುವ ಶ್ರೀ ಕೃಷ್ಣಪ್ಪ ಹೊಸಮನಿ (ಎಸ್.ಸಿ) ಇವರ ಪದೋನ್ನತಿ ಆದೇಶವನ್ನು ಸಹ ಇವರ ಮಟ್ಟಿಗೆ ಹಿಂಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 903

**ಬಿ.ವಿ. ಚೌಕಿಮಠ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಿ. ಸುಂದರ ನಾಯಕ್, ನಿವೃತ್ತ ಪಿ.ಎಸ್.ಐ. ರಾಜ್ಯ ಗುಪ್ತವಾರ್ತೆ, ಮಂಗಳೂರು ರವರ ಕನ್ನಡ ಭಾಷಾ ಪರೀಕ್ಷೆ ಮತ್ತು ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣಗೊಳಿಸಿರುವ ಪ್ರಯುಕ್ತ ಮಂಜೂರಾದ ಹೆಚ್ಚುವರಿ ವೇತನ ಬಡ್ತಿಯ ವೇತನ ವ್ಯತ್ಯಾಸದ ಬಿಲ್ಲಿನ ಪಾವತಿಗೆ ವಿಳಂಬ ಮನ್ನಾ ಆದೇಶ ನೀಡುವ ಬಗ್ಗೆ.

**ಓದಲಾಗಿದೆ :** 1) ಡಿಜಿ ಮತ್ತು ಐಜಿಪಿ ರವರ ಪತ್ರದ ಸಂಖ್ಯೆ: ಲೆಕ್ಕ–2/72/2004–05 ದಿನಾಂಕ 25–2–2005 ಮತ್ತು 6–6–2006.

2) ಪೊಲೀಸ್ ಇನ್ಸ್‌ಪೆಕ್ಟರ್, ರಾಜ್ಯ ಗುಪ್ತವಾರ್ತೆ, ಬೆಂಗಳೂರು ರವರ ಪತ್ರ ಸಂಖ್ಯೆ: ಎಸ್.ಬಿ.ಎ.–391/ಎ.ಸಿ./2005–06, ದಿನಾಂಕ 16–5–2006.

**ಪ್ರಸ್ತಾವನೆ :**

ಶ್ರೀ ಬಿ. ಸುಂದರ ನಾಯಕ್, ನಿವೃತ್ತ ಪಿ.ಎಸ್.ಐ. ರಾಜ್ಯ ಗುಪ್ತವಾರ್ತೆ, ಮಂಗಳೂರು ರವರ ಕನ್ನಡ ಭಾಷಾ ಪರೀಕ್ಷೆ ಮತ್ತು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವುದರಿಂದ ಸದರಿಯವರಿಗೆ ದಕ್ಷಿಣ ಕನ್ನಡ ಜಿಲ್ಲಾ ಪೊಲೀಸ್ ಕಛೇರಿಯ ಆದೇಶದಂತೆ ದಿನಾಂಕ 27–6–81ರಿಂದ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು ಮಂಜೂರು ಮಾಡಿ ದಿನಾಂಕ 27–6–81 ರಿಂದ 1–4–89ರ ವರೆಗೆ ವೇತನವನ್ನು ನಿಗಧಿಗೊಳಿಸಲಾಗಿದೆ. ಸದರಿಯವರು ದಿನಾಂಕ 17–9–89ರಂದು ಎ.ಎಸ್.ಐ. ಹುದ್ದೆಯಿಂದ ಪಿ.ಎಸ್.ಐ. ಹುದ್ದೆಗೆ ಮುಂಬಡ್ತಿ ಹೊಂದಿದ್ದು ದಿನಾಂಕ 17–9–89ರಿಂದ ಸೇವೆಯಿಂದ ನಿವೃತ್ತಿ ಹೊಂದುವವರೆಗೆ ಅಂದರೆ ಶ್ರೀ ಬಿ. ಸುಂದರ ನಾಯಕ್, ಪಿ.ಎಸ್.ಐ. ರವರು ದಿನಾಂಕ 31–5–99ರಂದು ವಯೋ ನಿವೃತ್ತಿ ಹೊಂದಿರುತ್ತಾರೆ.

ಶ್ರೀ ಬಿ. ಸುಂದರ ನಾಯಕ್, ನಿವೃತ್ತ ಪಿ.ಎಸ್.ಐ. ರಾಜ್ಯ ಗುಪ್ತವಾರ್ತೆ, ಮಂಗಳೂರು ರವರ ಕನ್ನಡ ಭಾಷಾ ಪರೀಕ್ಷೆ ಮತ್ತು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವುದರಿಂದ ಒಂದು ಹೆಚ್ಚುವರಿ ವೇತನ ಬಡ್ತಿಯ ವ್ಯತ್ಯಾಸದ ಬಗ್ಗೆ ಮಾಹಿತಿಗಳನ್ನು ಅವರು ಹಿಂದೆ ಕೆಲಸ ನಿರ್ವಹಿಸಿದ ಕಛೇರಿಗಳಿಂದ ಪಡೆಯಲು ವಿಳಂಬವಾಗಿದೆ. ಆದ್ದರಿಂದ ಆಗಸ್ಟ್ 1981 ರಿಂದ ಏಪ್ರಿಲ್ 1998ರ ವರೆಗೆ ವೇತನ ವ್ಯತ್ಯಾಸದ ಬಿಲ್ಲಿನ ಮೊತ್ತ ರೂ. 28,322/–ಗಳಿಗೆ (6 ವರ್ಷಗಳು ಮೀರಿರುವುದರಿಂದ) ವಿಳಂಬವನ್ನು ಮನ್ನಾ ಮಾಡುವಂತೆ ಡಿಜಿ ರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 106 ಪೊಸಇ 2005, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2008**

ಮೇಲೆ ವಿವರಿಸಿರುವ ಸನ್ನಿವೇಶದಲ್ಲಿ ಶ್ರೀ ಬಿ. ಸುಂದರ ನಾಯಕ್, ನಿವೃತ್ತ ಪಿ.ಎಸ್.ಐ. ರಾಜ್ಯ ಗುಪ್ತವಾರ್ತೆ, ಮಂಗಳೂರು ರವರ ಕನ್ನಡ ಭಾಷಾ ಪರೀಕ್ಷೆ ಮತ್ತು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿರುವ ಪ್ರಯುಕ್ತ ಮಂಜೂರಾದ

ಹೆಚ್ಚುವರಿ ವೇತನ ಬಡ್ತಿಯ ವೇತನ ವ್ಯತ್ಯಾಸದ ಬಿಲ್ಲಿಗೆ ವಿಳಂಬದ ವಿನಾಯಿತಿ ನೀಡಲು ಆದೇಶಿಸಿದೆ. ಸದರಿ ಕ್ಲೈಮನ್ನು ಪುನಃ ಪರಿಶೀಲಿಸಿ ಪಾವತಿಯು ಈ ಬಗ್ಗೆ ಹೊರಡಿಸಿರುವ ಸರ್ಕಾರಿ ಆದೇಶಗಳ ಪ್ರಕಾರ ಇದೆಯೇ ಎಂಬುದನ್ನು ಧೃಢಪಡಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1494 ವೆಚ್ಚ–6/2006 ದಿನಾಂಕ 14–2–2008ರಲ್ಲಿ ನೀಡಿರುವ ಒಪ್ಪಿಗೆ ಮೇರೆಗೆ ಹೊರಡಿಸಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 403

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಶಿಕ್ಷಣ ಸಚಿವಾಲಯ**

**ವಿಷಯ :** ಪದವಿ ಪೂರ್ವ ಶಿಕ್ಷಣ ಇಲಾಖೆಯಲ್ಲಿ 10 ವರ್ಷಗಳ ಸೇವೆ ಪೂರೈಸಿರುವ ಉಪನ್ಯಾಸಕರುಗಳಿಗೆ ರೂ. 6600–12160ಗಳ ವೇತನ ಶ್ರೇಣಿಗೆ ಸಂವಾಧಿ ವೇತನ ಶ್ರೇಣಿ ನಿಗಧಿಪಡಿಸುವ ಬಗ್ಗೆ.

**ಓದಲಾಗಿದೆ :** ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಪಪೂಶಿಇ/ ಸಿಬ್ಬಂದಿ/ಪ.ವೇ.ನಿ/2007–08, ದಿನಾಂಕ 23–7–2007.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 23–7–2007ರ ಪತ್ರದಲ್ಲಿ ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 08 ಎಸ್‌ಆರ್‌ಪಿ 2007, ದಿನಾಂಕ 16–5–2007ರಲ್ಲಿ ರಾಜ್ಯ ಸರ್ಕಾರಿ ನೌಕರರ ವೇತನ ಶ್ರೇಣಿಯನ್ನು ಪರಿಷ್ಕರಿಸಲಾಗಿದ್ದು, ಈ ವೇತನ ಶ್ರೇಣಿಯಲ್ಲಿ 10 ವರ್ಷಗಳ ಸೇವೆ ಪೂರೈಸಿರುವ ಉಪನ್ಯಾಸಕರಿಗೆ ನೀಡಲಾಗಿರುವ ರೂ. 6600–12160 (1999ರ ವೇತನ ಶ್ರೇಣಿ)ರ ವೇತನ ಶ್ರೇಣಿಗೆ ಸಂವಾಧಿ ವೇತನ ಶ್ರೇಣಿ ನೀಡದಿರುವುದರಿಂದ ಉಪನ್ಯಾಸಕರುಗಳಿಗೆ ಪರಿಷ್ಕೃತ ವೇತನ ನಿಗಧಿಗೊಳಿಸಲು ಸಾಧ್ಯವಾಗಿರುವುದಿಲ್ಲವೆಂದು ಪ್ರಸ್ತಾಪಿಸಿ, ರೂ. 6600–12160ಗಳ ವೇತನ ಶ್ರೇಣಿಗೆ ಸಂವಾದಿಯಾಗಿ ಪರಿಷ್ಕೃತ ವೇತನ ಶ್ರೇಣಿ ನಿಗಧಿಗೊಳಿಸುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 117 ಡಿಜಿಎಂ 2007, ಬೆಂಗಳೂರು, ದಿನಾಂಕ: 3ನೇ ಮಾರ್ಚ್ 2008**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ, 5ನೇ ವೇತನ ಆಯೋಗದ ಅಂತಿಮ ವರದಿಯ ಎರಡನೇ ಸಂಪುಟದ ಕಂಡಿಕೆ–3.48.9ರಲ್ಲಿ ವೇತನ ಆಯೋಗವು ಮಾಡಿರುವ ಶಿಫಾರಸ್ಸಿನಂತೆ ಪದವಿ ಪೂರ್ವ ಕಾಲೇಜುಗಳ ಹಿರಿಯ ಉಪನ್ಯಾಸಕರಿಗೆ ಪ್ರಸ್ತುತ ವೇತನ ಶ್ರೇಣಿ ರೂ. 6600–12160ಗೆ ಸಂವಾದಿಯಾಗಿ 2007ರ ಪರಿಷ್ಕೃತ ವೇತನ ಶ್ರೇಣಿ ರೂ. 12650–23250ನ್ನು ಮಂಜೂರು ಮಾಡಿ, ಪ್ರಾರಂಭಿಕ ವೇತನ ಶ್ರೇಣಿಯನ್ನು ದಿನಾಂಕ 1–7–2005ರಿಂದ ಅನ್ವಯವಾಗುವಂತೆ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಈ ಆದೇಶದೊಂದಿಗೆ ಲಗತ್ತಿಸಿರುವ ಅನುಬಂಧದಲ್ಲಿನ ಕೋಷ್ಠಕದ 1ನೇ ಅಂಕಣದಲ್ಲಿ ನಮೂದಿಸಿರುವ ಪ್ರಸಕ್ತ ವೇತನ ಶ್ರೇಣಿಯಲ್ಲಿ ಮೂಲ ವೇತನಕ್ಕೆ ಸಂವಾದಿಯಾಗಿ ಕೋಷ್ಠಕದ 2ನೇ ಅಂಕಣದಲ್ಲಿ ನಿಗಧಿಪಡಿಸಿರುವ ಹಂತದಲ್ಲಿ ವೇತನ ನಿಗಧಿಗೊಳಿಸಲು ಆದೇಶಿಸಿದೆ.

2) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 1044 ವೆಚ್ಚ–08/ 2007, ದಿನಾಂಕ 1–3–2008ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು–1,2)

**ಸರ್ಕಾರದ ಆದೇಶ ಸಂಖ್ಯೆ: ಇಡಿ 117 ಡಿಜಿಎಂ 2007, ದಿನಾಂಕ 3–3–2008ಕ್ಕೆ ಅನುಬಂಧ**

| ಪ್ರಸಕ್ತ ವೇತನ ಶ್ರೇಣಿ (1999) ರೂ. 6600–150–7200–200–8800–320–12160 | ಪರಿಷ್ಕೃತ ವೇತನ ಶ್ರೇಣಿ (2007) ರೂ. 12650–350–14400–400–16800–450–19500–525–22650–600–23250 |
|---|---|
| ಪ್ರಸಕ್ತ ವೇತನ ಶ್ರೇಣಿಯಲ್ಲಿ ಮೂಲ ವೇತನ | ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮೂಲ ವೇತನ |
| 6600 | 12650 |

| ಪ್ರಸಕ್ತ ವೇತನ ಶ್ರೇಣಿ (1999) ರೂ. 6600–150–7200–200–8800–320–12160 | ಪರಿಷ್ಕೃತ ವೇತನ ಶ್ರೇಣಿ (2007) ರೂ. 12650–350–14400–400–16800–450–19500–525–22650–600–23250 |
|---|---|
| ಪ್ರಸಕ್ತ ವೇತನ ಶ್ರೇಣಿಯಲ್ಲಿ ಮೂಲ ವೇತನ | ಪರಿಷ್ಕೃತ ವೇತನ ಶ್ರೇಣಿಯಲ್ಲಿ ಮೂಲ ವೇತನ |
| 9580 | 18150 |

| | | | |
|---|---|---|---|
| 6750 | 13000 | 9840 | 18600 |
| 6900 | 13350 | 10100 | 19050 |
| 7050 | 13350 | 10360 | 20025 |
| 7200 | 13700 | 10620 | 20025 |
| 7400 | 14050 | 10880 | 20550 |
| 7600 | 14400 | 11200 | 21600 |
| 7800 | 14800 | 11520 | 22125 |
| 8000 | 15200 | 11840 | 22650 |
| 8200 | 15600 | 12160 | 23250 |
| 8400 | 16000 | 12480 | 23250+600 ವೈ.ವೇ |
| 8600 | 16400 | 12800 | 23250+1200 ವೈ.ವೇ |
| 8800 | 16800 | 13120 | 23250+1800 ವೈ.ವೇ |
| 9060 | 17250 | 13440 | 23250+2400 ವೈ.ವೇ |
| 9320 | 17700 | 13760 | 23250+3000 ವೈ.ವೇ |

**ಎಂ.ಎಂ. ಹಿರೇಮಠ**
ಪಿ.ಆರ್. 588
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ಸೇವೆಗಳು-1,2)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್. ಸಿದ್ರಾಮಪ್ಪ ಡಿವೈ.ಎಸ್.ಪಿ. (ಹಾಲಿ ನಿವೃತ್ತ) ರವರು ಸುಳ್ಳು ಜಾತಿ ಪ್ರಮಾಣ ಪತ್ರವನ್ನು ನೀಡಿ ಕೆಲಸಕ್ಕೆ ಸೇರಿದ ಬಗ್ಗೆ ಅವರ ವಿರುದ್ಧ ಇಲಾಖಾ ವಿಚಾರಣೆ ಕೈಬಿಡುವ ಬಗ್ಗೆ.

**ಓದಲಾಗಿದೆ :**
1) ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ5/ 51/ 2002-03, ದಿನಾಂಕ 31-12-2003.
2) ಸರ್ಕಾರದ ಆದೇಶ ಸಂಖ್ಯೆ: ಒಇ 8 ಪೊಸಿಪ 2004, ದಿನಾಂಕ 5-2-2004.
3) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 713, ಎಸ್.ಎ..ಡಿ. 93 ದಿನಾಂಕ 11-3-2002.
4) ಡಿ.ಜಿ. ಮತ್ತು ಐ.ಜಿ.ಪಿ. ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ5/ 51/ 2002-03, ದಿನಾಂಕ 4-12-2006.

**ಪ್ರಸ್ತಾವನೆ :**

ಶ್ರೀ ಎಸ್. ಸಿದ್ರಾಮಪ್ಪ, ಡಿವೈ.ಎಸ್.ಪಿ. (ಹಾಲಿ ನಿವೃತ್ತ) ಶಹಾಬಾದ್ ಉಪ ವಿಭಾಗ, ಗುಲ್ಬರ್ಗಾ ಇವರು ಪಿ.ಎಸ್.ಐ. ಆಗಿ ಕೆಲಸಕ್ಕೆ ಸೇರುವಾಗ ಪರಿಶಿಷ್ಠ ಪಂಗಡಕ್ಕೆ ಸೇರಿದವೆಂದು ಸುಳ್ಳು ಜಾತಿ ಪ್ರಮಾಣ ಪತ್ರವನ್ನು ಸಲ್ಲಿಸಿ ನೇಮಕಾತಿ ಹೊಂದಿರುತ್ತಾರೆ. ಅದೇ ಜಾತಿ ಆಧಾರದ ಮೇಲೆ ಪಿ.ಐ. ಹಾಗೂ ಡಿವೈ.ಎಸ್.ಪಿ. ಹುದ್ದೆಗೆ ಮುಂಬಡ್ತಿ ಪಡೆದಿರುತ್ತಾರೆ. ಇವರು ಮೂಲತಃ ತಳವಾರ (ಕಬ್ಬಲಿಗ) ಜಾತಿಗೆ ಸೇರಿದ್ದರೂ "ಜಿನ್ನಿಕೋಯ" ಎಂಬ ಪರಿಶಿಷ್ಠ ಜಾತಿಗೆ ಸೇರಿದವರೆಂದು ಸುಳ್ಳು ಜಾತಿ ಪ್ರಮಾಣ ಪತ್ರವನ್ನು ಸಲ್ಲಿಸಿ ಪಿ.ಎಸ್.ಪಿ. ಹುದ್ದೆಗೆ ನೇರ ನೇಮಕಾತಿ ಹೊಂದಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕೆ.ಎಸ್.ಪಿ. (ಡಿ.ಪಿ.) ನಿಯಮಗಳು, 1965ರ ಪ್ರಕಾರ ಕ್ರಮ ಜರುಗಿಸುವಂತೆ ಮೇಲೆ ಓದಲಾದ (1)ರ ಪತ್ರದಲ್ಲಿ ಡಿಜಿ ರವರು ಸರ್ಕಾರವನ್ನು ಕೋರಿದ್ದರು. ಈ ಹಿನ್ನಲೆಯಲ್ಲಿ ಸರ್ಕಾರವು ಶ್ರೀ ಎಸ್. ಸಿದ್ರಾಮಪ್ಪ, ಡಿವೈ.ಎಸ್.ಪಿ. ಇವರ ವಿರುದ್ಧ ಮೇಲೆ (2)ರಲ್ಲಿ ಓದಲಾದ ದಿನಾಂಕ 5-2-2004ರ ಸರ್ಕಾರದ ಆದೇಶದಲ್ಲಿ ಕೆ.ಎಸ್.ಪಿ. (ಡಿ.ಪಿ) ನಿಯಮಗಳು, 1965ರ ನಿಯಮ 6ರನ್ವಯ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು (ಆಡಳಿತ) ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ (3)ರ ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಡಿ 713 ಎಸ್.ಎ.ಡಿ. 93 ದಿನಾಂಕ 11-3-2002ರಲ್ಲಿ ಹೊರಡಿಸಿರುವ ಆದೇಶದಲ್ಲಿ ಈ ಕೆಳಕಂಡಂತೆ ತಿಳಿಸಲಾಗಿದೆ.

"The appointments already made in respect of the persons belonging to pariwara, Talwar, Maalery, Kuruba, Besta and Koli communities who have obtained employment under ST quota (as Nayaka, Maalery, Kadu Kuruba, Jenu Kuruba, Gond, Rajgond, Kolidhor and Tokrikoli) shall be treated as appointments under GM Category w.e.f. the date of this order. they shall not be eligible for any promotion of any other benefits as

STs in future. However, they could claim benefits under the respective category of Backward Classes to which they belong as per the existing Government Order"

ಮೇಲೆ ಓದಲಾದ (4)ರಲ್ಲಿ ಸದರಿಯವರ ಮನವಿ ಹಾಗೂ ಅಡಕಗಳನ್ನು ಪರಿಶೀಲಿಸಲಾಗಿ ಸದರಿಯವರು ಅವರ ವಿರುದ್ಧ ಇರುವ ಇಲಾಖಾ ವಿಚಾರಣೆಯನ್ನು ಸರ್ಕಾರದ ಆದೇಶ ದಿನಾಂಕ 11–3–2002ರನ್ವಯ ಹಾಗೂ ಸದರಿಯವರ ಪ್ರಕರಣದಲ್ಲಿ ಡಿ.ಸಿ. ಮತ್ತು ಅಧ್ಯಕ್ಷರು ಜಾತಿ ಪರಿಶೀಲನಾ ಸಮಿತಿ, ಗುಲ್ಬರ್ಗಾ ರವರು ದಿನಾಂಕ 12–12–2002ರಲ್ಲಿ ಸದರಿಯವರ ಜಾತಿ ವಿಚಾರಣೆ ಕುರಿತು ಸಾಮಾನ್ಯ ವರ್ಗವೆಂದು ಪರಿಗಣಿಸಿ ಕಡತವನ್ನು ಕೈಬಿಡಲಾಗಿದೆ ಎಂದು ಆದೇಶಿಸಿರುತ್ತದೆ.

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 8 ಪೊಸಿಪ 2004, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಶ್ರೀ ಎಸ್. ಸಿದ್ರಾಮಪ್ಪ, ಡಿವೈ.ಎಸ್.ಪಿ. (ಹಾಲಿ ನಿವೃತ್ತ) ಶಹಬಾದ್ ಉಪ ವಿಭಾಗ, ಗುಲ್ಬರ್ಗಾ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಕೈ ಬಿಡಲಾಗಿದೆ.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 35

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಅರುಣ್ ಗೋಡಬೋಲೆ, ಡಿವೈ.ಎಸ್.ಪಿ. ಮತ್ತು ಶ್ರೀ ಬಸವರಾಜು, ಎ.ಪಿ.ಸಿ. 156 ರವರುಗಳ ವಿರುದ್ಧ ಇಲಾಖಾ ಶಿಸ್ತಿನ ಕ್ರಮ ಜರುಗಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಒಇ 437 ಪೊಸಿಪ 2006, ದಿನಾಂಕ 20–2–2007.
2) ಡಿಜಿ ಮತ್ತು ಐಜಿಪಿ, ಬೆಂಗಳೂರು ರವರ ಪತ್ರ ಸಂಖ್ಯೆ: ಸಿಬಿ(5)40/ 2005–06, ದಿನಾಂಕ 5–12–2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಶ್ರೀ ಅರುಣ್ ಗೋಡಬೋಲೆ, ಡಿವೈ.ಎಸ್.ಪಿ. ಕೊಪ್ಪಳ ಉಪ ವಿಭಾಗ ಮತ್ತು ಶ್ರೀ ಬಸವರಾಜು ಎ.ಪಿ.ಸಿ. 156 ಡಿ.ಎ.ಆರ್. ಕೊಪ್ಪಳ ರವರುಗಳು ದಿನಾಂಕ 7–3–2005ರಂದು ಲಾರಿ ಚಾಲಕರುಗಳಿಂದ ಹಣ ವಸೂಲಿ ಮಾಡುವ ಉದ್ದೇಶದಿಂದ ಲಾರಿಯ ಮತ್ತು ಲಾರಿಯಲ್ಲಿದ್ದ ಲೋಡ್‌ಗೆ ಸಂಬಂಧಪಟ್ಟ ದಾಖಲೆಗಳನ್ನು ಕಸಿದುಕೊಂಡು ಮಾನಸಿಕ ಹಿಂಸೆ ನೀಡುತ್ತಿದ್ದರಿಂದ ಇವರುಗಳ ವಿರುದ್ಧ ದೋಷಾರೋಪಣೆಗಳನ್ನು ಹೊರಡಿಸಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965/89ರ ನಿಯಮ 6 ಮತ್ತು 8ರ ಅನ್ವಯ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಲಾಗಿದೆ.

ಡಿಜಿ ಮತ್ತು ಐಜಿಪಿ ರವರು ಮೇಲೆ (2)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ಇದೇ ದೋಷಾರೋಪಣೆಗಳಿಗಾಗಿ ಶ್ರೀ ಬಸವರಾಜು, ಎ.ಪಿ.ಸಿ. 156, ಡಿ.ಎ.ಆರ್., ಕೊಪ್ಪಳ ಜಿಲ್ಲೆ ಇವರಿಗೆ ಎಸ್.ಪಿ. ಕೊಪ್ಪಳ ರವರ ಈಗಾಗಲೇ ಶಿಕ್ಷೆಯನ್ನು ವಿಧಿಸಿ ಅವರ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗೆ ಪರಿಣಾಮ ಬೀರುವಂತೆ ಮೂರು ವರ್ಷಗಳ ಕಾಲ ಮುಂದೂಡಿ ಇವರ ಅಮಾನತ್ತಿನ ಅವಧಿ 11–3–2005ರಿಂದ 18–3–2006ರ ವರೆಗೆ ಅಮಾನತ್ತೆಂದೇ ಪರಿಗಣಿಸಿ ಶಿಕ್ಷೆಯನ್ನು ವಿಧಿಸಿರುವುದರಿಂದ, ಒಂದೇ ಆರೋಪಕ್ಕೆ ಸಂಬಂಧಿಸಿದಂತೆ ಎರಡು ಬಾರಿ ಶಿಕ್ಷೆ ವಿಧಿಸಲು ನಿಯಮಗಳಲ್ಲಿ ಅವಕಾಶವಿಲ್ಲದಿರುವುದರಿಂದ ಇವರ ಹೆಸರನ್ನು ಪ್ರಸ್ತುತ ಇಲಾಖಾ ವಿಚಾರಣೆಯಿಂದ ಕೈಬಿಡುವ ಬಗ್ಗೆ ಕೋರಿರುತ್ತಾರೆ.

ವಿಷಯವನ್ನು ಪರಿಶೀಲಿಸಿ ಸರ್ಕಾರವು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 437 ಪೊಸಿಪ 2006, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2007**

ಸರ್ಕಾರದ ಆದೇಶ ಸಂಖ್ಯೆ: ಒಇ 437 ಪೊಸಿಪ 2006 ದಿನಾಂಕ 20–2–2007ರಲ್ಲಿ ಆದೇಶಿಸಿರುವ ಇಲಾಖಾ ವಿಚಾರಣೆಯಿಂದ ಶ್ರೀ ಬಸವರಾಜು, ಎ.ಪಿ.ಸಿ. 156, ಡಿ.ಎ.ಆರ್., ಕೊಪ್ಪಳ ಜಿಲ್ಲೆ ಇವರ ಹೆಸರನ್ನು ಕೈಬಿಡಲಾಗಿದೆ. ಶ್ರೀ ಅರುಣ್ ಗೋಡಬೋಲೆ ಡಿವೈ.ಎಸ್.ಪಿ. (ನಿವೃತ್ತ) ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಶೀಘ್ರವಾಗಿ ಅಂತಿಮಗೊಳಿಸಿ ವರದಿ ಸಲ್ಲಿಸಲು ಸೂಚಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 39

**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಪರಿಷ್ಕರಣ ಮೇಲ್ಮನವಿ ಪ್ರಕರಣಗಳ ಕಡತಗಳನ್ನು ವಿಲೇವಾರಿ ಮಾಡುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ಪೊಲೀಸ್ ಕಾಯ್ದೆ, 1963ರ ಸೆಕ್ಷನ್ 25(1)ರ ಪ್ರಕಾರ, ಸದರಿ ಕಾಯ್ದೆಯ ಸೆಕ್ಷನ್ 23ರಡಿಯಲ್ಲಿ ಪೊಲೀಸ್ ಅಧಿಕಾರಿ/ ಸಿಬ್ಬಂದಿಗಳಿಗೆ ವಿಧಿಸಲಾದ ಶಿಕ್ಷೆಯ ವಿರುದ್ಧ ಮೇಲ್ಮನವಿಯನ್ನು ಸರ್ಕಾರಕ್ಕೆ ಅಥವಾ ಸರ್ಕಾರ ನಿಗಧಿಪಡಿಸಿದ ಅಧಿಕಾರಿಗೆ ಸಲ್ಲಿಸಬಹುದಾಗಿರುತ್ತದೆ. ಪರಿಷ್ಕರಣ ಅರ್ಜಿಗಳು ಬಹಳಷ್ಟು ಪ್ರಮಾಣದಲ್ಲಿ ಸ್ವೀಕೃತವಾಗುತ್ತಿದ್ದು, ರಾಜ್ಯದಲ್ಲಿ ಪ್ರಸ್ತುತ ರಾಷ್ಟ್ರಪತಿಯವರ ಆಡಳಿತ ಜಾರಿಯಲ್ಲಿದೆ. ಪರಿಷ್ಕರಣ ಮೇಲ್ಮನವಿಯನ್ನು ಇತ್ಯರ್ಥಪಡಿಸುವ ಅಧಿಕಾರವನ್ನು ಸರ್ಕಾರದ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ, ಗೃಹ ಇಲಾಖೆ ಇವರಿಗೆ ನೀಡಲು ಉದ್ದೇಶಿಸಲಾಗಿದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 396 ಪೊಸಿಅ 2007, ಬೆಂಗಳೂರು, ದಿನಾಂಕ: 26ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಕರ್ನಾಟಕ ಪೊಲೀಸ್ ಕಾಯ್ದೆ, 1963ರ ಸೆಕ್ಷನ್ 25(1)ರ ಪ್ರಕಾರ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕ ರಾಜ್ಯ ಪೊಲೀಸ್ ಕಾಯ್ದೆ, 1963ರ ಸೆಕ್ಷನ್ 23ರಡಿಯಲ್ಲಿ ಪೊಲೀಸ್ ಅಧಿಕಾರಿ / ಸಿಬ್ಬಂದಿಗಳ ಮೇಲೆ ವಿಧಿಸಲಾದ ಶಿಕ್ಷೆಯ ವಿರುದ್ಧ ಪರಿಷ್ಕರಣ ಮೇಲ್ಮನವಿಗಳನ್ನು ಇತ್ಯರ್ಥಪಡಿಸುವ ಅಧಿಕಾರವನ್ನು ಸರ್ಕಾರದ

ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿ, ಗೃಹ ಇಲಾಖೆ ಇವರಿಗೆ ನೀಡಿದೆ. ಈ ಆದೇಶವು ರಾಜ್ಯದಲ್ಲಿ ರಾಷ್ಟ್ರಪತಿಯವರ ಆಡಳಿತ ಜಾರಿಯಲ್ಲಿರುವವರೆಗೆ ಮಾತ್ರ ಚಾಲ್ತಿಯಲ್ಲಿರುತ್ತದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 81

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕುಮಾರಿ ಶ್ವೇತಾ ಎಸ್. ಬೆಂಗಳೂರು ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತಶಾಖೆಯಲ್ಲಿನ ಶೀಘ್ರಲಿಪಿಗಾರರ ಹುದ್ದೆಗೆ ಗುತ್ತಿಗೆ ಆಧಾರದ ಮೇಲಿನ ನೇಮಕಾತಿಯನ್ನು ಮುಂದುವರಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 57 ಕೆಓಎಲ್ 2006, ದಿನಾಂಕ 9–4–2007.
2) ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರ ಪತ್ರ ಸಂಖ್ಯೆ: ಕಅಪ್ರಾ/ಕಾ/9/2007–08, ದಿನಾಂಕ 27–11–2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕುಮಾರಿ ಶ್ವೇತ, ಇವರನ್ನು ದಿನಾಂಕ 15–11–2006 ರಿಂದ 14–11–2007ರವರೆಗೆ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತಶಾಖೆಯಲ್ಲಿನ ಶೀಘ್ರಲಿಪಿಗಾರರ ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಲಾಗಿತ್ತು. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕುಮಾರಿ ಶ್ವೇತಾ ಎಸ್. ಅವರ ಗುತ್ತಿಗೆ ಆಧಾರದ ಅವಧಿಯು ದಿನಾಂಕ 14–11–2007ಕ್ಕೆ ಮುಕ್ತಾಯಗೊಳ್ಳಲಿದ್ದು ಇದನ್ನು 15–11–2007ರಿಂದ ಜಾರಿಗೆ ಬರುವಂತೆ ಮುಂದುವರಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 64 ಕೆಓಎಲ್ 2007, ಬೆಂಗಳೂರು, ದಿನಾಂಕ: 1ನೇ ಏಪ್ರಿಲ್ 2008**

ಕುಮಾರಿ ಶ್ವೇತಾ ಎಸ್. ಬೆಂಗಳೂರು ಇವರನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತಶಾಖೆಯಲ್ಲಿನ ಶೀಘ್ರಲಿಪಿಗಾರರ ಹುದ್ದೆಗೆ ಈ ಆದೇಶದೊಡನೆ ಲಗತ್ತಿಸಿರುವ ಷರತ್ತು ಮತ್ತು ನಿಬಂಧನೆಗೆ ಒಳಪಟ್ಟಂತೆ ಗುತ್ತಿಗೆ ಆಧಾರದ ಮೇಲೆ ದಿನಾಂಕ 15–11–2007ರಿಂದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಈಗಿನ ಅಧ್ಯಕ್ಷರ ಪದಾವಧಿ ಮುಗಿಯುವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಆರ್ಥಿಕ ಇಲಾಖೆಯ ಸಹಮತಿಯನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 320 ವೆಚ್ಚ: 5/2008, ದಿನಾಂಕ 10–3–2008ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಕೆ. ಭರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 64 ಕೆಓಎಲ್ 2007 ದಿನಾಂಕ 1ನೇ ಏಪ್ರಿಲ್ 2008**

**ಗುತ್ತಿಗೆ ನೇಮಕಾತಿಯ ಬಗ್ಗೆ ಷರತ್ತು ಮತ್ತು ನಿಬಂಧನೆಗಳು**

1. ಕುಮಾರಿ ಶ್ವೇತಾ ಎಸ್ ಇವರ ಗುತ್ತಿಗೆ ನೇಮಕಾತಿ ಅವಧಿಯು ದಿ: 15–11–2007 ರಿಂದ ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಈಗಿನ ಅಧ್ಯಕ್ಷರ ಪದಾವಧಿ ಮುಗಿಯುವವರೆಗೆ ಅಥವಾ ಮುಂದಿನ ಆದೇಶದವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮಾತ್ರ ಇದ್ದು, ಇದೊಂದು ತಾತ್ಕಾಲಿಕ ನೇಮಕಾತಿ ಆಗಿರುತ್ತದೆ.
2. ಇವರ ಗುತ್ತಿಗೆ ನೇಮಕಾತಿಗೆ ಮಾಸಿಕ ರೂ. 6565/– (ಆರು ಸಾವಿರದ ಐದು ನೂರ ಅರವತ್ತೈದು ರೂಪಾಯಿಗಳು ಮಾತ್ರ) ಸಂಚಿತ ವೇತನವನ್ನು ನಿಗದಿಪಡಿಸಲಾಗಿದೆ. ಇದಲ್ಲದೆ, ಇನ್ನಿತರ ಯಾವುದೇ ಭತ್ಯೆಗಳಿಗೂ ಇವರು ಅರ್ಹರಾಗಿರುವುದಿಲ್ಲ.
3. ಸದರಿ ಗುತ್ತಿಗೆ ನೌಕರನು ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಯಾಣ ಮಾಡಲೇಬೇಕಾದಲ್ಲಿ ಮಾತ್ರ ಅವರು ನೇಮಕಾತಿ ಹೊಂದಿರುವ ಹುದ್ದೆಯ ಕಾಲಿಕ ವೇತನ ಶ್ರೇಣಿಯ ಕನಿಷ್ಠ ವೇತನದ ಮೇಲೆ ನಿಯಮಾನುಸಾರ ಲಭ್ಯವಿರುವ ಪ್ರಯಾಣಭತ್ಯೆ ಮತ್ತು ದಿನಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
4. ಸದರಿ ಗುತ್ತಿಗೆ ನೌಕರರುಗಳು ವಾರ್ಷಿಕ 15 ದಿನಗಳ ಸಾಂದರ್ಭಿಕ ರಜೆಯನ್ನು ಮಾತ್ರ ಪಡೆಯಲು ಅರ್ಹರಾಗಿರುತ್ತಾರೆ.
5. ಸಕ್ಷಮ ಪ್ರಾಧಿಕಾರದ ಅನುಮತಿ ಪಡೆಯದೇ ವೈದ್ಯಕೀಯ ಕಾರಣಗಳ ಮೇರೆಗಾಗಲೀ ಅಥವಾ ಬೇರೆ ಕಾರಣಗಳಿಂದಾಗಲೀ ಅನಧಿಕೃತ ಗೈರು ಹಾಜರಿಯಾದಲ್ಲಿ ಗುತ್ತಿಗೆ ಆಧಾರದ ನೇಮಕಾತಿಯು ತಾನಾಗಿಯೇ ರದ್ದಾಗುತ್ತದೆ.
6. ಸಕ್ಷಮ ಪ್ರಾಧಿಕಾರದ ಪೂರ್ವಾನುಮತಿ ಪಡೆದು, ವೈದ್ಯಕೀಯ ಕಾರಣಗಳ ಮೇರೆಗೆ ಅಥವಾ ಸಮರ್ಥನೀಯ ಕಾರಣಗಳ ಮೇರೆಗೆ ಗುತ್ತಿಗೆ ಆಧಾರದ ಅವಧಿಯಲ್ಲಿ ಮೂರು ತಿಂಗಳಿಗೆ ಮೀರದಂತೆ, ಗೈರುಹಾಜರಾದಲ್ಲಿ ಆ ಕಾರಣದಿಂದ ಗುತ್ತಿಗೆ ನೇಮಕಾತಿ ರದ್ದಾಗುವುದಿಲ್ಲ. ಆದರೆ ಈ ಅವಧಿಯನ್ನು ಕರ್ತವ್ಯ ರಹಿತ ದಿನಗಳೆಂದು (ಡೈಸ್–ನಾನ್) ಪರಿಗಣಿಸಲಾಗುವುದು ಮತ್ತು ಅವರು ಈ ಅವಧಿಗೆ ಯಾವುದೇ ವೇತನ ಮತ್ತು ಇತರೆ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.
7. ಒಪ್ಪಂದದ ಷರತ್ತು ಮತ್ತು ನಿಬಂಧನೆಗಳಲ್ಲಿ ನೀಡಿರುವ ಸೌಲಭ್ಯಗಳ ಹೊರತಾಗಿ ಬೇರಾವುದೇ ಸೌಲಭ್ಯಕ್ಕೆ ಅಂದರೆ ವೇತನ ಬಡ್ತಿ ಪದೋನ್ನತಿ, ಪಿಂಚಣಿ ಇತ್ಯಾದಿ ಸೌಲಭ್ಯಗಳಿಗೆ ಸದರಿ ಗುತ್ತಿಗೆ ನೌಕರರು ಅರ್ಹರಾಗಿರುವುದಿಲ್ಲ.
8. ಸದರಿ ನೌಕರರ ದುರ್ವರ್ತನೆ, ನಿರ್ಲಕ್ಷತೆಯ ನಿಮಿತ್ತ ಸರ್ಕಾರಕ್ಕೆ ಸಂಬಂಧಿಸಬಹುದಾದ ಎಲ್ಲಾ ನಷ್ಟಗಳನ್ನು ಸರ್ಕಾರಕ್ಕೆ ಸದರಿ ನೌಕರರು ಭರಿಸಿಕೊಡಲು ಬದ್ಧರಾಗಿರತಕ್ಕದ್ದು.
9. ಸದರಿ ಗುತ್ತಿಗೆ ನೇಮಕಾತಿಯನ್ನು ಯಾವುದೇ ಕಾರಣಕ್ಕೂ ಖಾಯಂ ಎಂದು ಪರಿಗಣಿಸುವುದಿಲ್ಲ.
10. ಅವರ ಕರ್ತವ್ಯ, ಕಾರ್ಯ ಮತ್ತು ಪ್ರಕಾರ್ಯಗಳನ್ನು ಶ್ರದ್ಧೆ, ಭಕ್ತಿ ಮತ್ತು ಆಸಕ್ತಿಯಿಂದ ಅವರು ನೆರವೇರಿಸುವುದು.
11. ಅವರು ಕರ್ತವ್ಯವನ್ನು ಪಾಲಿಸುತ್ತಿರುವಾಗ ಅಥವಾ ನೆರವೇರಿಸುತ್ತಿರುವಾಗ ಅವರಿಗೆ ಲಭ್ಯವಾಗಬಹುದಾದ ಅಥವಾ ದೊರಕಬಹುದಾದ ಅಧಿಕೃತ ಮಾಹಿತಿಯನ್ನು ಗೌಪ್ಯವಾಗಿಟ್ಟು ಕಟ್ಟುನಿಟ್ಟಾಗಿ ಪಾಲಿಸಬೇಕು.
12. 1966ರ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ ಮತ್ತು 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗೆ ಅವರು ಬದ್ಧರಾಗಿರುತ್ತಾರೆ.
13. ಈ ಒಪ್ಪಂದದ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಗುತ್ತಿಗೆ ನೇಮಕಾತಿಯು ತಾನಾಗಿಯೇ ಮುಕ್ತಾಯವಾಗುತ್ತದೆ.
14. ಅವರ ದುರ್ನಡತೆಯಿಂದಾಗಲೀ ಅಥವಾ ನಿರ್ಲಕ್ಷತೆ, ಉದಾಸೀನತೆಯಿಂದಾಗಲೀ ಮತ್ತು ಸರ್ಕಾರಕ್ಕೆ ಸಂಬಂಧಿಸಿದಂತೆ ಆರ್ಥಿಕ ನಷ್ಟವನ್ನು ಅವರು ಸರ್ಕಾರಕ್ಕೆ ತುಂಬಿಕೊಡಲು ಹೊಣೆಯಾಗಿರುತ್ತಾರೆ.
15. ಈ ಆದೇಶವನ್ನು ಸ್ವೀಕರಿಸಿದ ದಿನಾಂಕದಿಂದ ಏಳು ದಿನಗಳ ಒಳಗಾಗಿ ಐವತ್ತು ರೂಪಾಯಿಗಳ ಮೌಲ್ಯದ ಛಾಪಾ ಕಾಗದದಲ್ಲಿ ಸದರಿ ನೇಮಕಾತಿಯ ಷರತ್ತು ಮತ್ತು ನಿಬಂಧನೆಗಳನ್ನು ಒಳಗೊಂಡಿರುವ ಕರಾರು ಪತ್ರವನ್ನು ಕ್ರಮಬದ್ಧ ರೀತಿಯಲ್ಲಿ ಸದರಿ ನೌಕರರಿಂದ ಬರೆಯಿಸಿಕೊಳ್ಳತಕ್ಕದ್ದು.

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 590

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಶಿಕ್ಷಣ ಸಚಿವಾಲಯ**

**ಸಂಖ್ಯೆ: ಇಡಿ 117 ಡಿಜಿಎಂ 2007, ಬೆಂಗಳೂರು, ದಿನಾಂಕ 8ನೇ ಏಪ್ರಿಲ್ 2008**

**ಸೇರ್ಪಡೆ**

ದಿನಾಂಕ 3–3–2008ರ ಸರ್ಕಾರದ ಆದೇಶ ಸಂಖ್ಯೆ: ಇಡಿ 117 ಡಿಜಿಎಂ 2007ರ ಆದೇಶದ 5ನೇ ಸಾಲಿನಲ್ಲಿ "ಪ್ರಾರಂಭಿಕ ವೇತನ ಶ್ರೇಣಿಯನ್ನು ದಿನಾಂಕ 1–7–2005 ರಿಂದ ಅನ್ವಯವಾಗುವಂತೆ" ಎಂದಿರುವುದರ ಮುಂದೆ "ಈ ಪರಿಷ್ಕೃತ ವೇತನ ಶ್ರೇಣಿಯು 2005ರ 1ನೇ ಜುಲೈ ರಿಂದ ಜಾರಿಗೆ ಬಂದಿರುವುದಾಗಿ ಭಾವಿಸತಕ್ಕದ್ದು. ಹಾಗೂ ಕರ್ನಾಟಕಣ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಾವಳಿ 2007ರಲ್ಲಿನ ಎಲ್ಲಾ ನಿಯಮಗಳು ಪ್ರಸ್ತುತ ಉಪನ್ಯಾಸಕರುಗಳಿಗೂ ಅನ್ವಯವಾಗುತ್ತದೆ" ಎಂದು ಸಹ ಸೇರಿಸಿ ಓದಿಕೊಳ್ಳತಕ್ಕದ್ದು.

ಭಾರತ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 613

**ಎಂ.ಎಂ. ಹಿರೇಮಠ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ (ಸೇವೆಗಳು–1,2)

**ಕಂದಾಯ ಸಚಿವಾಲಯ**

**ವಿಷಯ :** ವಿಜಾಪುರ ಜಿಲ್ಲೆ, ಮುದ್ದೇಬಿಹಾಳ ತಾಲ್ಲೂಕು, ಬಿದರಕುಂದಿ ಗ್ರಾಮದ ಸರ್ವೆ ನಂ. 129 ರಲ್ಲಿ 21 ಎಕರೆ 17 ಗುಂಟೆ ಹೆಚ್ಚುವರಿ ಜಮೀನನ್ನು ಸರ್ಕಾರದ ಕಾರ್ಯಾಲಯಗಳ ಕಟ್ಟಡ ಮತ್ತು ಕ್ರೀಡಾಂಗಣ ಉದ್ದೇಶಕ್ಕಾಗಿ ಕಾಯ್ದಿರಿಸುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳು, ವಿಜಾಪುರ ಜಿಲ್ಲೆ ಇವರ ಪತ್ರ ಸಂಖ್ಯೆ: ಬಿಎಲ್‌ಆರ್/ ಎಂಸಿಆರ್.68/ 04–05, ದಿನಾಂಕ 18–3–2005 ಮತ್ತು 3–10–2007.

**ಪ್ರಸ್ತಾವನೆ :**

ಜಿಲ್ಲಾಧಿಕಾರಿಗಳು, ವಿಜಾಪುರ ಇವರ ದಿನಾಂಕ 18–3–2005ರ ಪತ್ರದಲ್ಲಿ ವಿಜಾಪುರ ಜಿಲ್ಲೆ ಮುದ್ದೇಬಿಹಾಳ ತಾಲ್ಲೂಕು, ಬಿದರಕುಂದಿ ಗ್ರಾಮದ ಸರ್ವೆ ನಂ. 129 ರಲ್ಲಿ 21 ಎಕರೆ 17 ಗುಂಟೆ ಹೆಚ್ಚುವರಿ ಜಮೀನು ಮುದ್ದೇಬಿಹಾಳ ತಾಲ್ಲೂಕು ಭೂ ನ್ಯಾಯ ಮಂಡಳಿಯಿಂದ ಮಂಜೂರಾಗಿದ್ದು ಸದರಿ ಜಮೀನನ್ನು ಸರ್ಕಾರದ ಕಾರ್ಯಾಲಯಗಳ ಕಟ್ಟಡ ಮತ್ತು ಕ್ರೀಡಾಂಗಣ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯದೆ 1961ರ ಕಲಂ 77(3)ರಡಿ ಸಾರ್ವಜನಿಕ ಉದ್ದೇಶಕ್ಕಾಗಿ ಮೀಸಲಿರಿಸುವಂತೆ ಜಿಲ್ಲಾಧಿಕಾರಿಗಳು ಕೋರಿರುತ್ತಾರೆ. ಜಿಲ್ಲಾದಿಕಾರಿಯವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಸದರಿ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕೆ ಮೀಸಲಿರಿಸಲು ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 58 ಎಲ್‌ಆರ್‌ಎಂ 2005 ಬೆಂಗಳೂರು, ದಿನಾಂಕ: 27ನೇ ಮಾರ್ಚ್ 2008**

ಜಿಲ್ಲಾಧಿಕಾರಿ, ವಿಜಾಪುರ ಅವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 77(3)ರಂತೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕು, ಬಿದರಕುಂದಿ ಗ್ರಾಮದ ಸ.ನಂ. 129 ರಲ್ಲಿ 21 ಎಕರೆ 17 ಗುಂಟೆ ಹೆಚ್ಚುವರಿ ಜಮೀನನ್ನು ಸಾರ್ವಜನಿಕ ಉದ್ದೇಶಕ್ಕಾಗಿ ಅಂದರೆ ಸರ್ಕಾರದ ಕಾರ್ಯಾಲಯಗಳ ಕಟ್ಟಡ ಮತ್ತು ಕ್ರೀಡಾಂಗಣ ಉದ್ದೇಶಕ್ಕಾಗಿ ಮೀಸಲಿರಿಸಿ ಆದೇಶಿಸಿದೆ.

ಭಾರತ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 615

**ಟಿ.ಎನ್. ನಾರಾಯಣ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣೆ)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಎಸ್. ಮಹದೇವ ಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು, 4ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು ಇವರ ವಿರುದ್ಧ ದಾಖಲಾದ ಟ್ರಾಪ್ ಪ್ರಕರಣದ ಅಭಿಯೋಜನಾ ಮಂಜೂರಾತಿ ಕುರಿತು.

**ಉಲ್ಲೇಖ :**
1) ಅಪರ ಪೊಲೀಸ್ ಮಹಾನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ನಂ. ಲೋಕ್/ಐಎನ್‌ವಿ(ಜಿ)/ಎಂ–03/ಸಿಆರ್–01/ 2007, ಮೈಸೂರು ದಿನಾಂಕ 21-1-2008.
2) ತನಿಖಾಧಿಕಾರಿಯ ವರದಿ ಸಂಖ್ಯೆ: ಕಲೋ/ಪೋವಿ/ಮೈಪಿಎಸ್/ಮೊ.ಸಂ./01/2007, ದಿನಾಂಕ 28–6–2007.

3) ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಶ್ರೀ ಎಸ್. ಮಹದೇವ ಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು, ಗೌರವಾನ್ವಿತ 4ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು ಇವರ ವಿರುದ್ಧ ಗುನ್ನೆ ಸಂಖ್ಯೆ: 1/2007ರಲ್ಲಿ ಆರಕ್ಷಕ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಮೈಸೂರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯು ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು ಅಪರ ಪೊಲೀಸ್ ಮಹಾ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ ಓದಲಾದ (1)ರ ತಮ್ಮ ಪತ್ರ ದಿನಾಂಕ 21–1–2008ರೊಡನೆ ಕಳುಹಿಸುತ್ತಾ, ಆಪಾದಿತನನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ 19ನೆಯ ಕಲಂನ ಅಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಮೇಲೆ (1)ರಲ್ಲಿ ಓದಲಾದ ಪತ್ರ ದಿನಾಂಕ 21–1–2008ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ರಂಜನ್ ಶೆಟ್ಟಿ ಬಿನ್ ಕೆ. ನಾರಾಯಣಶೆಟ್ಟಿ, ನಂ. 05, 1ನೇ ಕ್ರಾಸ್, 3ನೇ ಹಂತ, ನಾರ್ತ್ ಆಫ್ ಗೋಕುಲಂ, ಮೈಸೂರು ರವರ ಫಿರ್ಯಾದಿ ದಿನಾಂಕ 17–1–2007.
2) ಪ್ರಥಮ ವರ್ತಮಾನ ವರದಿ, ಮೈಸೂರು ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 1/2007.
3) ಪ್ರಾಯೋಗಿಕ ಪಂಚನಾಮೆ ದಿನಾಂಕ 17–1–2007.
4) ಟ್ರ್ಯಾಪ್ ಮಹಜರ್ ದಿನಾಂಕ 18–1–2007.
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಪಿಹೆಚ್ಐ/ಸಿಎಂಇ/ಎಲ್ಒಕೆ/149/06–07, ದಿನಾಂಕ 7–2–2007.
6) ಕೃತ್ಯ ನಡೆದ ಸ್ಥಳದ ನಕಾಶೆ.
7) ಸಾಕ್ಷಿಗಳ ಹೇಳಿಕೆಗಳು: (1) ಶ್ರೀ ರಂಜನ್ ಶೆಟ್ಟಿ ಬಿನ್ ಕೆ. ನಾರಾಯಣ ಶೆಟ್ಟಿ (2) ಶ್ರೀ ಟಿ. ವೆಂಕಟೇಶ್ ಬಿನ್ ಲೇಟ್ ಬಿ.ಜಿ. ತಿಮ್ಮಯ್ಯ (3) ಶ್ರೀ ಕೆ.ಎನ್. ನರೇಂದ್ರಬಾಬು ಬಿನ್ ಲೇಟ್ ನಂಜಯ್ಯ (4) ಶ್ರೀಮತಿ ಕವಿತಾಶೆಟ್ಟಿ ಕೋಂ ರಂಜನ್ ಶೆಟ್ಟಿ (5) ಶ್ರೀ ವಿ. ಮುರಳೀಧರ್ (6) ಶ್ರೀ ಎಸ್. ಕೃಷ್ಣಮೂರ್ತಿ (7) ಶ್ರೀ ಎಂ.ಸಿ. ಮಹೇಶ್ (8) ಶ್ರೀ ಎ.ವಿ. ಕೃಷ್ಣಮೂರ್ತಿ (9) ಶ್ರೀ ತಿರುಮಲ್ಲೇಶ ಮತ್ತು (10) ಶ್ರೀ ವಿ. ನಾಗೇಂದ್ರ
8) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳ ರೀತ್ಯ ಶ್ರೀ ರಂಜನ್ ಶೆಟ್ಟಿ ಯವರ ಮಗಳಾದ ರೇಷ್ಮಶೆಟ್ಟಿ ಇವರು ಅಂತರಜಾತಿ ವಿವಾಹವಾಗಿದ್ದು, ದಿನಾಂಕ 1–1–2006ರಂದು ನಿಧನ ಹೊಂದಿರುತ್ತಾರೆ. ಇವರು ನಿಧನ ಹೊಂದುವ ಮುಂಚೆ ಸಾವಿನ ಕಾರಣದ ಬಗ್ಗೆ ತಹಶೀಲ್ದಾರ್‌ರವರಿಗೆ ಲಿಖಿತವಾಗಿ ದೂರು ನೀಡಿರುತ್ತಾರೆ. ಈ ದೂರಿನ ಸಂಬಂಧ ಮೈಸೂರು ನಗರದ ಉದಯಗಿರಿ ಪೊಲೀಸ್ ಠಾಣೆಯಲ್ಲಿ ಪ್ರಕರಣ ದಾಖಲಾಗಿದ್ದು, ಅದು ಗೌರವಾನ್ವಿತ 4ನೇ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಸಿ.ಸಿ.ನಂ. 103/2006ರ ರೀತ್ಯಾ ವಿಚಾರಣೆ ನಡೆಯುತ್ತಿರುವುದಾಗಿ ಇದರಲ್ಲಿ ಫಿಯ್ಯಾದಿ ಹಾಗೂ ಅವರ ಪತ್ನಿಯವರಾದ ಶ್ರೀಮತಿ ಕವಿತಾಶೆಟ್ಟಿ ಯವರು ಸಾಕ್ಷೀದಾರರಾಗಿದ್ದು, ಮಗಳ ಸಾವಿಗೆ ನ್ಯಾಯ ಕೊಡಿಸಲು ಸಹಾಯಕ ಸರ್ಕಾರಿ ಅಭಿಯೋಜಕರಾದ ಶ್ರೀ ಎಸ್. ಮಹದೇವಸ್ವಾಮಿಯವರನ್ನು ಕಂಡು ಕೋರಿಕೊಂಡಾಗ ಅವರು ಹಣಕ್ಕೆ ಪೀಡಿಸಿ ದಿನಾಂಕ 16–1–2007ರಂದು ಬರಲು ಹೇಳಿ ಈ ಪ್ರಕರಣದಲ್ಲಿ ಸರಿಯಾಗಿ ವಾದ ಮಾಡಲು ಆಗಾಗ್ಗೆ ಹಣ ನೀಡುತ್ತಿರಬೇಕು ಎಂದು ಹೇಳಿ, ದಿನಾಂಕ 18–1–2007ರಂದು ವಿಚಾರಣೆ ಇರುತ್ತದೆ. ಆ ದಿನ ನಾನು ಕೋರ್ಟಿಗೆ ಹೋಗುವ ಮುಂಚೆ 10.00 ಗಂಟೆಗೆ ನನಗೆ ರೂ. 1,000/– (ಒಂದು ಸಾವಿರ ರೂಪಾಯಿಗಳನ್ನು) ತಂದುಕೊಡಬೇಕೆಂದು ಫಿರ್ಯಾಧಿದಾರರಿಂದ ಆರೋಪಿತ ಅಧಿಕಾರಿಯವರು ಒತ್ತಾಯಿಸಿರುತ್ತಾರೆ.
9) ಟ್ರಾಪ್ ಮಹಜರ್ ಕಾಲದಲ್ಲಿ ಆರೋಪಿತ ಸರ್ಕಾರಿ ಅಧಿಕಾರಿಯವರಿಂದ ಸಿ.ಸಿ. ನಂ. 103/2006 ಹಾಗೂ ಸಿ.ಸಿ.ನಂ. 125/2006 ಪ್ರಕರಣದ ಕಡತಗಳು ಮೈಸೂರು ನಗರದ ವಾಣಿವಿಲಾಸ ಪುರಂ ಪೊಲೀಸ್ ಠಾಣೆಯ ಪ್ರಕರಣಗಳು ಪಿರ್ಯಾದಿದಾರರಿಗೆ ಸಂಬಂಧಪಟ್ಟದ್ದಾಗಿರುತ್ತದೆ. ಈ ಪ್ರಕರಣದಲ್ಲಿ ಗೌ. 4ನೇ ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಆರೋಪಿತರು ವಾದ ಮಂಡಿಸುವ ಸಹಾಯಕ ಸರ್ಕಾರಿ ಅಭಿಯೋಜಕರಾಗಿರುತ್ತಾರೆ.

10) ಆಪಾದಿತರ ಸಮಜಾಯಿಷಿ ಹೇಳಿಕೆ ಶ್ರೀ ಎಸ್. ಮಹದೇವ ಸ್ವಾಮಿ ಬಿನ್ ಶ್ರೀ ಸುಬ್ಬಶೆಟ್ಟಿ, ಸಹಾಯಕ ಸರ್ಕಾರಿ ಅಭಿಯೋಜಕರು, ಗೌ. 4ನೇ ಜೆಎಂಎಫ್‌ಸಿ ನ್ಯಾಯಾಲಯ, ಮೈಸೂರು.

ತನಿಖಾಧಿಕಾರಿಗಳಾದ ಶ್ರೀ ಡಿ. ಜಯರಾಂ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ ಮೈಸೂರು ಇವರು ಶ್ರೀ ಎಸ್. ಮಹದೇವಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರ ವಿರುದ್ಧ ದಂಡಾರ್ಹ ಪ್ರಕರಣವನ್ನು ಮೈಸೂರು ಲೋಕಾಯುಕ್ತ ಠಾಣೆ ಇಲ್ಲಿ ಮೊಕದ್ದಮೆ ಸಂಖ್ಯೆ: 1/2007ರಲ್ಲಿ ಲಂಚನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಶ್ರೀ ಎಸ್. ಮಹದೇವಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು ಇವರು ಫಿರ್ಯಾಧಿದಾರರಾದ ಶ್ರೀ ರಂಜನ್ ಶೆಟ್ಟಿ ಬಿನ್ ಕೆ. ನಾರಾಯಣ ಶೆಟ್ಟಿ, ನಂ.5, 1ನೇ ಕ್ರಾಸ್, 3ನೇ ಹಂತ, ನಾರ್ತ್ ಆಫ್ ಗೋಕುಲಂ, ಮೈಸೂರು ಇವರು ಮೈಸೂರಿನ ಗೌರವಾನ್ವಿತ 4ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು ಇಲ್ಲಿ ದಾಖಲಾಗಿದ್ದ ಸಿ.ಸಿ.ನಂ. 103/2006 ಹಾಗೂ ಸಿ.ಸಿ. ನಂ. 125/2006ರಲ್ಲಿ ಫಿರ್ಯಾಧಿ ಮತ್ತು ಅವರ ಪತ್ನಿ ಶ್ರೀಮತಿ ಕವಿತಾಶೆಟ್ಟಿ ಯವರು ಸಾಕ್ಷಿದಾರರಾಗಿದ್ದು, ಸಹಾಯಕ ಸರ್ಕಾರಿ ಅಭಿಯೋಜಕರಾದ ಆರೋಪಿತ ಶ್ರೀ ಮಹದೇವಸ್ವಾಮಿಯವರನ್ನು ಹಣಕ್ಕೆ ಪೀಡಿಸಿ ದಿನಾಂಕ 16–1–2007ರಂದು ಬರಲು ಹೇಳಿ ಈ ಪ್ರಕರಣದಲ್ಲಿ ಸರಿಯಾಗಿ ವಾದ ಮಾಡಲು ಆಗಾಗ್ಗೆ ಹಣ ನೀಡುತ್ತಿರಬೇಕು ಎಂದು ಹೇಳಿ, ದಿನಾಂಕ 18–1–2007ರಂದು ವಿಚಾರಣೆ ಇರುತ್ತದೆ. ಆ ದಿನ ನಾನು ಕೋರ್ಟಿಗೆ ಹೋಗುವ ಮುಂಚೆ 10.00 ಗಂಟೆಗೆ ಫಿರ್ಯಾಧಿದಾರರಿಂದ ರೂ. 1,000/– (ಒಂದು ಸಾವಿರ ರೂಪಾಯಿಗಳನ್ನು) ಅಕ್ರಮ ಸಂಭಾವನೆಯನ್ನು ಕೇಳಿರುತ್ತಾರೆ. ಫಿರ್ಯಾಧಿದಾರರು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಸರ್ಕಾರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದಿನಾಂಕ 17–1–2007ರಂದು ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಬಲೆ ಬೀಸುವ ಮೊದಲಿನ ಎಲ್ಲ ಔಚಿತ್ಯಪೂರ್ಣ ಕಾರ್ಯಕ್ರಮಗಳನ್ನು ನೆರವೇರಿಸಿದ ನಂತರ ದಿನಾಂಕ 18–1–2007ರಂದು ಆರೋಪಿತ ಸರ್ಕಾರಿ ಅಧಿಕಾರಿಯವರು ಕರ್ತವ್ಯ ನಿರ್ವಹಿಸುವ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 4ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು ಸರ್ಕಾರಿ ಅಭಿಯೋಜಕರ ಕಛೇರಿ ಕಟ್ಟಡ, ಪಂಪಾಪತಿ ರಸ್ತೆ, ಸರಸ್ವತಿಪುರಂ, ಮೈಸೂರು ಇಲ್ಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಶ್ರೀ ಎಸ್. ಮಹದೇವಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು ಇವರು ಅಕ್ರಮ ಸಂಭಾವನೆಯಾದ ರೂ. 1,000/–ಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಆಪಾದಿತ ಸಾರ್ವಜನಿಕ ಅಧಿಕಾರಿಯ ಬಲಗೈ ಮತ್ತು ಎಡಗೈ ಬೆರಳುಗಳನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ಮಾರ್ಜನೆ ಮಾಡಿ ಹಾಗೂ ವಸ್ತುಗಳನ್ನು ಫಿನಾಪ್ತಲಿನ್ ಪರೀಕ್ಷೆಗೆ ಒಳಪಡಿಸಿದಾಗ ಅದು ಸಕಾರಾತ್ಮಕವಾಗಿ ಪ್ರತಿಕ್ರಿಯಿಸಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ಅಧಿಕಾರಿಯ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 1,000/–ಗಳನ್ನು ಶ್ರೀ ಎಸ್. ಮಹದೇವಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರಿಂದ ಅವರು ಕರ್ತವ್ಯ ನಿರ್ವಹಿಸುವ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ, 4ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು, ಸರ್ಕಾರಿ ಅಭಿಯೋಜಕರ ಕಛೇರಿ ಕಟ್ಟಡ, ಪಂಪಾಪತಿ ರಸ್ತೆ, ಸರಸ್ವತಿಪುರಂ, ಮೈಸೂರು ಇಲ್ಲಿ ಪಂಚರ ಸಮಕ್ಷಮ ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತ ಅಧಿಕಾರಿಯನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರವುಳ್ಳದಾಗಿರುತ್ತದೆ. ಆದ್ದರಿಂದ ಲಂಚ ನಿರೋಧ ಕಾಯ್ದೆ 1988ರ ಕಲಂ 19(1)(ಬಿ)ರ ಅಡಿ ಆಪಾದಿತ ಸರ್ಕಾರಿ ಅಧಿಕಾರಿ ಶ್ರೀ ಎಸ್. ಮಹದೇವಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು ರವರನ್ನು ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 50 ಪಿಪಿಇ 2007, ಬೆಂಗಳೂರು, ದಿನಾಂಕ: 10ನೇ ಏಪ್ರಿಲ್ 2008**

ಲಂಚ ನಿರೋಧ ಕಾಯಿದೆ 1988ರ ಕಲಂ 19(1)(ಬಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿದ ಸರ್ಕಾರವು ಶ್ರೀ ಎಸ್. ಮಹದೇವಸ್ವಾಮಿ, ಸಹಾಯಕ ಸರ್ಕಾರಿ ಅಭಿಯೋಜಕರು, ಪ್ರಧಾನ ಜೆ.ಎಂ.ಎಫ್.ಸಿ. ನ್ಯಾಯಾಲಯ, ತಿಪಟೂರು (ಹಿಂದಿನ ಸಹಾಯಕ ಸರ್ಕಾರಿ ಅಭಿಯೋಜಕರು, 4ನೇ ಜೆ.ಎಂ.ಎಫ್.ಸಿ. ನ್ಯಾಯಾಲಯ, ಮೈಸೂರು) ಇವರ ವಿರುದ್ಧ ಕಲಂ 7, 13(1)(ಡಿ) ಜೊತೆಗೆ ಓದಲಾದ ಕಲಂ 13(2)ರ ಲಂಚ ನಿರೋಧ ಕಾಯ್ದೆ 1988ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ

ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೋಲೀಸರಿಗೆ ಈ ಮೂಲಕ ಅನುಮತಿ ನೀಡುತ್ತಿದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿರ್ವಹಣೆ ನಿಯಮಾವಳಿ 1977ರ ನಿಯಮ 19(1)ರನ್ವಯ ಮೇಲ್ಕಂಡ ಆದೇಶವನ್ನು ನನ್ನ ಕಛೇರಿಯ ಮೊಹರು ಮತ್ತು ನನ್ನ ಸಹಿ ಅಡಿಯಲ್ಲಿ ದಿನಾಂಕ 10–4–2008ರಂದು ಹೊರಡಿಸಲಾಗಿದೆ.

ಭಾರತದ ರಾಷ್ಟ್ರಪತಿಗಳ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 610

**ಆರ್. ಲೀಲಾವತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ

(ಕಾ. ಮತ್ತು ಸು, ಹಾಗೂ ಕಾಫಿಪೋಸಾ ಮತ್ತು ಅಭಿಯೋಗಗಳು)

**ಶಿಕ್ಷಣ ಸಚಿವಾಲಯ**

**ವಿಷಯ :** ಹೊಸದಾಗಿ 2007–08ನೇ ಸಾಲಿನಲ್ಲಿ ಪ್ರಾರಂಭವಾದ ಪದವಿ ಪೂರ್ವ ಕಾಲೇಜುಗಳಿಗೆ ಅನಾವರ್ತಕ ವೆಚ್ಚಗಳಿಗೆ ಅನುದಾನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರ ಏಕ ಕಡತ ಸಂಖ್ಯೆ ಪಪೂಶಿಇ/ ಶೈಶಾ–1/ಅ.ವೆ/2007–08, ದಿನಾಂಕ 19–11–2007.

**ಪ್ರಸ್ತಾವನೆ :**

1) ಮೇಲೆ ಓದಲಾದ ಏಕಕಡತದಲ್ಲಿ ಆಯುಕ್ತರು, ಪದವಿಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರು 2007–08ನೇ ಸಾಲಿಗೆ ಜಾರಿಗೆ ಬರುವಂತೆ ಒಟ್ಟು 293 ಸರ್ಕಾರಿ ಸಂಯುಕ್ತ/ಸ್ವತಂತ್ರ ಪದವಿಪೂರ್ವ ಕಾಲೇಜುಗಳನ್ನು ಮಂಜೂರು ಮಾಡಲಾಗಿತ್ತು. ಎಲ್ಲಾ ಕಾಲೇಜುಗಳಿಗೆ ಅನಾವರ್ತಕ ವೆಚ್ಚಗಳಿಗಾಗಿ ತಲಾ 1.00 ಲಕ್ಷ ರೂ.ಗಳನ್ನು ಮಂಜೂರು ಮಾಡಲಾಗಿರುತ್ತದೆಯೆಂದು ಹಾಗೂ ಸಂಖ್ಯೆ: ಇಡಿ 191 ಎಸ್.ಹೆಚ್.ಹೆಚ್. 2007, ದಿನಾಂಕ 22–8–2007ರ ಸರ್ಕಾರಿ ಆದೇಶದಲ್ಲಿ ಮಂಜೂರಾದ 190 ಸರ್ಕಾರಿ ಸಂಯುಕ್ತ/ಸ್ವತಂತ್ರ ಪದವಿಪೂರ್ವ ಕಾಲೇಜುಗಳ ಪೈಕಿ 115 ಸರ್ಕಾರಿ ಪದವಿಪೂರ್ವ ಕಾಲೇಜುಗಳು ಪ್ರಾರಂಭವಾಗಿದ್ದು, ಉಳಿದ 75 ಕಾಲೇಜುಗಳು ಈ ಸಾಲಿನಲ್ಲಿ ಇನ್ನೂ ಪ್ರಾರಂಭವಾಗಿರುವುದಿಲ್ಲ. ಪ್ರಾರಂಭವಾಗದ 75 ಸರ್ಕಾರಿ ಪದವಿಪೂರ್ವ ಕಾಲೇಜುಗಳ ಅನಾವರ್ತಕ ವೆಚ್ಚಗಳಿಗಾಗಿ ಮಂಜೂರಾದ 75.00 ಲಕ್ಷ ರೂ.ಗಳು ಬಾಕಿ ಉಳಿದಿರುತ್ತದೆ ಎಂದು ತಿಳಿಸಿರುತ್ತಾರೆ.

2) ಮುಂದುವರೆದು 2006–07ನೇ ಸಾಲಿಗೆ ಮಂಜೂರಾದ 199 ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಪೈಕಿ 2007–08ನೇ ಸಾಲಿನಲ್ಲಿ ಪ್ರಾರಂಭಿಸಲಾದ 51 ಸರ್ಕಾರಿ ಪದವಿ ಪೂರ್ವ ಕಾಲೇಜುಗಳ ಅನಾವರ್ತಕ ವೆಚ್ಚಕ್ಕಾಗಿ ಮೇಲೆ ಉಳಿತಾಯವಾಗುವ 75.00 ಲಕ್ಷ ರೂ.ಗಳಲ್ಲಿ ತಲಾ 1.00 ಲಕ್ಷ ರೂ.ಗಳಂತೆ 51.00 ಲಕ್ಷ ರೂ.ಗಳನ್ನು ಬಿಡುಗಡೆ ಮಾಡಲು ಹಾಗೂ ಉಳಿದ 24.00 ಲಕ್ಷ ರೂ.ಗಳನ್ನು ಕಳೆದ ಸಾಲಿನಲ್ಲಿ ಪ್ರಾರಂಭವಾದ 148 ಕಾಲೇಜುಗಳಿಗೆ ವಿದ್ಯಾರ್ಥಿಗಳ ಸಂಖ್ಯೆಗಳಿಗನುಗುಣವಾಗಿ ಅನಾವರ್ತಕ ನಿಧಿಯನ್ನು ಉಪಯೋಗಿಸಿಕೊಳ್ಳಲು ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ.

3) ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 10 ಯೋಯೋಕಾ 2007, ಬೆಂಗಳೂರು, ದಿನಾಂಕ: 17ನೇ ಜನವರಿ 2008**

**(ಇಡಿ 8 ಸ್ಕೀಮರ (ಯುನಿಕ್) ಬೆಂಗಳೂರು ದಿನಾಂಕ 17–1–2008)**

4) 2007–08ನೇ ಸಾಲಿಗೆ ಮಂಜೂರಾದ 293 ಸರ್ಕಾರಿ ಪದವಿಪೂರ್ವ ಕಾಲೇಜುಗಳ ಅನಾವರ್ತಕ ವೆಚ್ಚಗಳಿಗಾಗಿ ತಲಾ 1.00 ಲಕ್ಷ ರೂಗಳಂತೆ ಬಿಡುಗಡೆ ಮಾಡಲಾದ 293.00 ಲಕ್ಷಗಳ ಪೈಕಿ ಉಳಿತಾಯವಾಗುವ 75.00 ಲಕ್ಷ ರೂ.ಗಳಲ್ಲಿ (ಎಪ್ಪತ್ತೈದು ಲಕ್ಷ ರೂಗಳು ಮಾತ್ರ) 51.00 ಲಕ್ಷ ರೂ.ಗಳನ್ನು (ಐವತ್ತೊಂದು ಲಕ್ಷ ರೂ.ಗಳು ಮಾತ್ರ) 2006–07ನೇ ಸಾಲಿನಲ್ಲಿ ಮಂಜೂರಾಗಿ 2007–08ನೇ ಸಾಲಿನಲ್ಲಿ ಪ್ರಾರಂಭವಾದ 51 ಕಾಲೇಜುಗಳಿಗೆ ಅನಾವರ್ತಕ ವೆಚ್ಚಗಳಿಗಾಗಿ ಬಳಸಿಕೊಳ್ಳಲು ಹಾಗೂ ಉಳಿದ 24.00 ಲಕ್ಷ ರೂಗಳನ್ನು (ಇಪ್ಪತ್ತನಾಲ್ಕು ಲಕ್ಷ ರೂಗಳು ಮಾತ್ರ) 2006–07ನೇ ಸಾಲಿನಲ್ಲಿ ಪ್ರಾರಂಭಿಸಲಾದ 148 ಕಾಲೇಜುಗಳಿಗೆ ವಿದ್ಯಾರ್ಥಿಗಳ ಸಂಖ್ಯೆಗಳಿಗೆ ಅನುಗುಣವಾಗಿ ಅನಾವರ್ತಕ ನಿಧಿಯನ್ನು ಬಳಸಿಕೊಳ್ಳಲು ಆಯುಕ್ತರು, ಪದವಿ ಪೂರ್ವ ಶಿಕ್ಷಣ ಇಲಾಖೆ, ಬೆಂಗಳೂರುರವರಿಗೆ ಅನುಮತಿ ನೀಡಲಾಗಿದೆ. ಸದರಿ ಅನುದಾನವನ್ನು ಆಯಾಯಾ ಕಾಲೇಜುಗಳ ಪ್ರಾಂಶುಪಾಲರು ಪೇಯೀಸ್ ರಸೀದಿ ಆಧಾರದ ಮೇಲೆ ಸೆಳೆಯಲು ಮತ್ತು ಕಾಲೇಜು ಅಭಿವೃದ್ಧಿ ಸಮಿತಿಯ ಅನುಮೋದನೆಯಂತೆ ಬಳಸಲು ಆದೇಶಿಸಿದೆ.

ಈ ವೆಚ್ಚವನ್ನು 2007–08ನೇ ಸಾಲಿಗೆ ಲೆಕ್ಕಶೀರ್ಷಿಕೆ "2202–02–109–0–13" ಅಡಿಯಲ್ಲಿ ನಿಗದಿಪಡಿಸಿರುವ ಆಯವ್ಯಯದ ಮಿತಿಯೊಳಗೆ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಶಿಇ/967/ಐ.ಎ.ಎಫ್. (ಬಿಎ)/ 2007/ ದಿನಾಂಕ 24–11–2007ರ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತ ರಾಷ್ಟ್ರಪತಿಯವರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 166

**ಐ.ಎಫ್. ಮಾಗಿ**
ವಿಶೇಷಾಧಿಕಾರಿಗಳು ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಶಿಕ್ಷಣ ಇಲಾಖೆ (ಯೋಜನೆ)

**ವಿಷಯ :** ಮಂಗಳೂರು ವಿಶ್ವವಿದ್ಯಾಲಯಕ್ಕೆ ವರ್ಗಾಯಿಸಲ್ಪಟ್ಟ ಸರ್ಕಾರಿ ಕಾಲೇಜುಗಳಲ್ಲಿನ ಅರೆಕಾಲಿಕ ಉಪನ್ಯಾಸಕರಾದ ಶ್ರೀ ಮಹಾದೇವಯ್ಯ ಇವರ ಸೇವಾ ಸಕ್ರಮಾತಿಯ ವಿಲೀನೀಕರಣದ ಬಗ್ಗೆ.

**ಉಲ್ಲೇಖ :**
1) ದಿ: 22–1–1997 ಸಂ. ಡಿಪಿಎಆರ್ 48 ಎಸ್ಆರ್ಇ 96ರ ಅಧಿಸೂಚನೆ.
2) ದಿ: 9–7–2002 ಸಂ. ಪಿಡಿಎಆರ್ 55 ಎಸ್ಆರ್ಇ 2001, ಅಧಿಸೂಚನೆ.
3) ಮಂಗಳೂರು ವಿಶ್ವವಿದ್ಯಾಲಯದ ಕುಲಸಚಿವರ ಪತ್ರ ಸಂ. ಮಂವಿ/22/ ಸಿಬ್ಬಂದಿ/7/2001–02/ ಕಡತ–2, ದಿ: 10–8–2007.

**ಪ್ರಸ್ತಾವನೆ :**

1) ಮಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳಾದ ವಿಶ್ವವಿದ್ಯಾಲಯ ಕಾಲೇಜು, ಮಂಗಳೂರು ಹಾಗೂ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಕಾಲೇಜು, ಮಡಿಕೇರಿ ಇಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದ ಶ್ರೀ ಮಹಾದೇವಯ್ಯ ಇವರನ್ನು ದಿ: 22–1–1997ರ ಸಂ. ಡಿಪಿಎಆರ್ 48 ಎಸ್ಆರ್ಇ 96ರ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿರುವ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಕರ್ನಾಟಕ ಶಿಕ್ಷಣ ಇಲಾಖೆಯ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಗಳು 1996ರ ತದನಂತರದ ತಿದ್ದುಪಡಿಗಳನ್ವಯ ಖಾಯಂ ಸೇವೆಯಲ್ಲಿ ವಿಲೀನಗೊಂಡಿರುವ ಬಗ್ಗೆ ಮಂಗಳೂರು ವಿಶ್ವವಿದ್ಯಾಲಯದ ಕುಲಸಚಿವರು ಪ್ರಸ್ತಾವನೆಯನ್ನು ಸರ್ಕಾರದ ಅನುಮೋದನೆಗೆ ಕಳುಹಿಸಿದ್ದಾರೆ. ಶ್ರೀ ಮಹಾದೇವಯ್ಯ, ಮಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳಾದ ವಿಶ್ವವಿದ್ಯಾಲಯ ಕಾಲೇಜು, ಮಂಗಳೂರು ಹಾಗೂ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಕಾಲೇಜು, ಮಡಿಕೇರಿ ಇಲ್ಲಿ ಇತಿಹಾಸ ವಿಷಯದಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ದಿನಾಂಕ: 8–7–93 ರಿಂದ 7–1–1994 ಹಾಗೂ ದಿ: 10–1–94 ರಿಂದ 30–3–94ರವರೆಗೆ ಸೇವೆ ಸಲ್ಲಿಸಿರುತ್ತಾರೆ. ಇವರು ಎಂ.ಎ. ಇತಿಹಾಸ ವಿಷಯದಲ್ಲಿ ಶೇ. 60ರಷ್ಟು ಅಂಕಗಳನ್ನು ಪಡೆದಿದ್ದು, ಅವರು ಪರಿಶಿಷ್ಟ ಜಾತಿಗೆ ಸೇರಿದವರಾಗಿರುತ್ತಾರೆ. ಮೇಲ್ಕಂಡ ಘಟಕ ಕಾಲೇಜುಗಳಲ್ಲಿ ಇತಿಹಾಸ ವಿಷಯ ಬೋಧನೆ ಇರುವ ಪ್ರವಾಸೋದ್ಯಮ ಕೋರ್ಸುಗಳನ್ನು ಅಳವಡಿಸಲು ಯೋಜಿಸಲಾಗಿದ್ದು, ಹೆಚ್ಚುವರಿ ಬೋಧನಾ ಕಾರ್ಯಭಾರವನ್ನು ನಿರೀಕ್ಷಿಸುವುದಾಗಿ ತಿಳಿಸಿರುತ್ತಾರೆ. ಮಂಗಳೂರು ವಿಶ್ವವಿದ್ಯಾಲಯದ ಸಿಂಡಿಕೇಟ್ ಇವರ ಮನವಿಯನ್ನು ಪರಿಶೀಲಿಸಿದ್ದು, ಪರಿಗಣಿಸಿ ಲಭ್ಯವಿರುವ ಹುದ್ದೆಯು ಬ್ಯಾಕ್‌ಲಾಗ್ ಹುದ್ದೆ ಅಲ್ಲದಿರುವುದರಿಂದ ಮತ್ತು ಸಾಮಾನ್ಯ ನೇಮಕಾತಿಗೆ ಲಭ್ಯವಿರುವುದರಿಂದ ಶ್ರೀ ಮಹಾದೇವಯ್ಯ ಇವರ ಸೇವಾ ಸಕ್ರಮಾತಿಯನ್ನು ನೀಡುವ ಬಗ್ಗೆ ಪ್ರಸ್ತಾವನೆಯನ್ನು ಸರ್ಕಾರ ಪರಿಶೀಲಿಸಿದೆ.

2) ಕರ್ನಾಟಕ ಶಿಕ್ಷಣ ಇಲಾಖೆಯ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಗಳು 1996ರನ್ನು ದಿ: 22–1–97ರ ಡಿಪಿಎಆರ್ 48 ಎಸ್ಆರ್ಇ 96ರ ಅಧಿಸೂಚನೆಯಲ್ಲಿ ರಾಜ್ಯ ಸರ್ಕಾರವು ಪ್ರಕಟಿಸಿದೆ. ಈ ನಿಯಮಗಳಲ್ಲಿ ಕುವೆಂಪು ವಿಶ್ವವಿದ್ಯಾಲಯ ಮತ್ತು ಮಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳಾಗಿ ಪರಿವರ್ತನೆಗೊಂಡಿರುವ ಶಿವಮೊಗ್ಗದ ಸಹ್ಯಾದ್ರಿ ಕಲಾ ಕಾಲೇಜು ಮತ್ತು ಸಹ್ಯಾದ್ರಿ ವಿಜ್ಞಾನ ಕಾಲೇಜು ಹಾಗೂ ಅಂದಿನ ಮಡಿಕೇರಿಯ ಸರ್ಕಾರಿ ಕಾಲೇಜು ಮತ್ತು ಮಂಗಳೂರು ಕಲಾ, ವಿಜ್ಞಾನ ಕಾಲೇಜುಗಳಲ್ಲಿ ಸೇವೆ ಸಲ್ಲಿಸುತ್ತಿರುವ ಅರೆಕಾಲಿಕ ಉಪನ್ಯಾಸಕರುಗಳಿಗೂ ಸಹ ಅನ್ವಯವಾಗುತ್ತದೆ. 1994–95ನೇ ಶೈಕ್ಷಣಿಕ ಸಾಲಿನ ಕೊನೆಯ ದಿನಾಂಕದಂದು 2(ಎರಡು) ವರ್ಷಗಳಿಗೆ ಕಡಿಮೆ ಇಲ್ಲದಂತೆ ಸೇವೆ ಸಲ್ಲಿಸಿರುವ ಅರೆಕಾಲಿಕ ಉಪನ್ಯಾಸಕರು ಈ ನಿಯಮಗಳಡಿಯಲ್ಲಿ ಖಾಯಂ ಸೇವೆಯಲ್ಲಿ ವಿಲೀನಗೊಳ್ಳಲು ಅರ್ಹರಾಗಿರುತ್ತಾರೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಅಭ್ಯರ್ಥಿಗಳಿಗೆ ಒಂದು ಶೈಕ್ಷಣಿಕ ವರ್ಷವನ್ನು ಕನಿಷ್ಠ ಅವಧಿಯನ್ನಾಗಿ ನಿರ್ಧಿಷ್ಟಪಡಿಸಲಾಗಿದೆ. ತದನಂತರದಲ್ಲಿ ನಿಯಮಗಳನ್ನು ತಿದ್ದುಪಡಿ ಮಾಡಿ ಎನ್ಇಟಿಯನ್ನು ಕಡ್ಡಾಯಗೊಳಿಸಲಾಗಿದ್ದು, ಮೂರು ವರ್ಷಗಳ ಅವಧಿಯಲ್ಲಿ ಎನ್ಇಟಿಯಲ್ಲಿ ತೇರ್ಗಡೆ ಹೊಂದಬೇಕೆಂದು, ಇಲ್ಲದಿದ್ದಲ್ಲಿ ಅವರನ್ನು ಸೇವೆಯಿಂದ ತೆಗೆದುಹಾಕಲಾಗುವುದೆಂಬ ಷರತ್ತನ್ನು ವಿಧಿಸಲಾಗಿದೆ. ಎನ್ಇಟಿ ತೇರ್ಗಡೆ ಹೊಂದದ ಅಭ್ಯರ್ಥಿಗಳು ಯುಜಿಸಿ ವೇತನ ಶ್ರೇಣಿಗೆ ಅರ್ಹರಾಗುವುದಿಲ್ಲ. ಆದ್ದರಿಂದ, ಅಂತಹವರನ್ನು ರಾಜ್ಯ ವೇತನ ಶ್ರೇಣಿಯಲ್ಲಿ ಖಾಯಂ ಸೇವೆಯಲ್ಲಿ ನಿಗಧಿತ ಅವಧಿಯೊಳಗೆ ದಿ: 16–9–2009ರೊಳಗೆ ಎಂ.ಫಿಲ್., ಪಿ.ಹೆಚ್.ಡಿ., ಎನ್ಇಟಿ/ ಎಸ್ಎಲ್ಇಟಿಯಲ್ಲಿ ತೇರ್ಗಡೆ ಹೊಂದಬೇಕೆಂಬ ಷರತ್ತನ್ನು ವಿಧಿಸಿ, ಖಾಯಂ

ಸೇವೆಯಲ್ಲಿ ವಿಲೀನಗೊಳಿಸಬೇಕಾಗುತ್ತದೆ. ಅರೆಕಾಲಿಕ ಉಪನ್ಯಾಸಕರಾದ ಶ್ರೀ ಮಹಾದೇವಯ್ಯ ಇವರ ಅರೆಕಾಲಿಕ ಸೇವೆಯನ್ನು ಸಕ್ರಮಗೊಳಿಸುವ ವಿಚಾರದಲ್ಲಿ ಸದರಿ ಕಾಲೇಜಿನ ಪ್ರಾಂಶುಪಾಲರು ನೀಡಿರುವ ಸೇವೆ ಪ್ರಮಾಣ ಪತ್ರವನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಈ ಪ್ರಮಾಣ ಪತ್ರದ ಪ್ರಕಾರ ಶ್ರೀಯುತರು 1993–94ನೇ ಸಾಲಿನ ಒಂದು ವರ್ಷ ಅವಧಿಯಲ್ಲಿ ಯಾವುದೇ ಸೇವಾ ವಿಚ್ಛಿನ್ನತೆ ಇಲ್ಲದೆ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿರುವುದು ಕಂಡು ಬರುತ್ತದೆ. ಆದ್ದರಿಂದ, ಮೇಲ್ಕಂಡ ನಿಯಮಗಳಲ್ಲಿ ನಿರ್ಧಿಷ್ಟಪಡಿಸಿರುವಂತೆ 1994–95ನೇ ಶೈಕ್ಷಣಿಕ ವರ್ಷದ ಕೊನೆಯ ದಿನಾಂಕದಂದು ಒಂದು ವರ್ಷಗಳಿಗೆ ಕಡಿಮೆ ಇಲ್ಲದಂತೆ ಅರೆಕಾಲಿಕ ಉಪನ್ಯಾಸಕರಾಗಿ ಸದರಿಯವರು ಸೇವೆ ಸಲ್ಲಿಸಿದ್ದು, ಈ ಷರತ್ತನ್ನು ಪೂರೈಸಿದ್ದಾರೆ. ಇವರು ಎಂ.ಎ. ಇತಿಹಾಸ ವಿಷಯದಲ್ಲಿ ಶೇ. 60ರಷ್ಟು ಅಂಕಗಳನ್ನು ಗಳಿಸಿದ್ದು, ಎನ್‌ಇಟಿ/ಎಸ್‌ಎಲ್‌ಇಟಿಯಲ್ಲಿ ತೇರ್ಗಡೆ ಹೊಂದಿಲ್ಲದಿರುವುದು ಕಂಡು ಬಂದಿದೆ. ಆದರೆ ಇತ್ತೀಚಿನ ಯುಜಿಸಿಯು ಆದೇಶ ಹೊರಡಿಸಿ ಎಫ್.ನಂ.1–1/2002 (ಪಿಎಸ್) Exemp ದಿನಾಂಕ 14–6–2006ರಂದು ಎಂ.ಫಿಲ್.ಪಿ.ಹೆಚ್.ಡಿ. ಪಾಸು ಮಾಡಿದ ಅಭ್ಯರ್ಥಿಗಳಿಗೆ ಎನ್‌ಇಟಿ/ ಎಸ್‌ಎಲ್‌ಇಟಿಯಿಂದ ವಿನಾಯಿತಿ ನೀಡಲಾಗಿದೆ.

3) ಆದ್ದರಿಂದ, ಅವರು ಯುಜಿಸಿ ವೇತನ ಶ್ರೇಣಿಗೆ ಅರ್ಹತೆ ಹೊಂದಿಲ್ಲ. ಅದರೆ, ಅವರು ಖಾಯಂ ಸೇವೆಯಲ್ಲಿ ವಿಲೀನಗೊಳಿಸಲು ಇವರು ಅರ್ಹತೆ ಹೊಂದಿರುವುದರಿಂದ ರಾಜ್ಯ ವೇತನ ಶ್ರೇಣಿಯಾದ ರೂ. 11,400–300–12300–350–14400–400–16800–450–19500–525–21600ರಲ್ಲಿ ನಿರ್ಧಿಷ್ಟಪಡಿಸಿರುವ ಅವಧಿಯೊಳಗೆ ಯುಜಿಸಿಯ ಅರ್ಹತೆಯಾದ ಎನ್‌ಇಟಿ/ ಎಸ್‌ಎಲ್‌ಇಟಿ ಎಂ.ಫಿಲ್/ ಪಿ.ಹೆಚ್.ಡಿ. ಯನ್ನು ಪಾಸು ಮಾಡಬೇಕೆಂದು ಇಲ್ಲದಿದ್ದಲ್ಲಿ ಸೇವೆಯಿಂದ ತೆಗೆದುಹಾಕಲಾಗುವುದೆಂಬ ಷರತ್ತನ್ನು ವಿಧಿಸಿ ಖಾಯಂ ಸೇವೆಯಲ್ಲಿ ವಿಲೀನಗೊಳಿಸುವ ಕುರಿತಂತೆ ಸರ್ಕಾರವು ಪರಿಶೀಲಿಸಿದ್ದು, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 163 ಯುಡಿವಿ 2007, ಬೆಂಗಳೂರು, ದಿನಾಂಕ: 27ನೇ ಡಿಸೆಂಬರ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜಾದ ಮಂಗಳೂರು ವಿಶ್ವವಿದ್ಯಾಲಯದ ಕಾಲೇಜಿನಲ್ಲಿ ದಿ: 8–7–93 ರಿಂದ 7–1–94 ಹಾಗೂ 10–1–94 ರಿಂದ 31–3–94ರವರೆಗೆ ಅರೆಕಾಲಿಕ ಉಪನ್ಯಾಸಕರಾಗಿ ಯಾವುದೇ ಸೇವಾ ವಿಚ್ಛಿನ್ನತೆ ಇಲ್ಲದೆ ಒಟ್ಟಾರೆ ಇತಿಹಾಸ ವಿಷಯದ ಅರೆಕಾಲಿಕ ಉಪನ್ಯಾಸಕರಾಗಿ ಸೇವೆ ಸಲ್ಲಿಸಿರುವ ಶ್ರೀ ಮಹಾದೇವಯ್ಯರವರು ತಾತ್ಕಾಲಿಕ ಸೇವೆಯಿಂದ ವಿಲೀನಿಕರಣ ಹೊಂದಲು ಎಲ್ಲಾ ಅರ್ಹತೆಯನ್ನು ಹೊಂದಿರುವುದರಿಂದ ಸದರಿಯವರ ತಾತ್ಕಾಲಿಕ ಸೇವೆಯನ್ನು ಕರ್ನಾಟಕ ಶಿಕ್ಷಣ ಇಲಾಖೆಯ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಾವಳಿಗಳು 1996 ಮತ್ತು ತದನಂತರದ ತಿದ್ದುಪಡಿಗಳನ್ವಯ ಮಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳಾದ ಮಂಗಳೂರು ಅಥವಾ ಮಡಿಕೇರಿ ಕಾಲೇಜುಗಳಲ್ಲಿನ ಬೇರೊಂದು ವಿಷಯದ ಖಾಲಿ ಹುದ್ದೆಯನ್ನು ಇತಿಹಾಸ ವಿಭಾಗದ ಉಪನ್ಯಾಸಕರ ಹುದ್ದೆಗೆ ಪರಿವರ್ತಿಸಿ ಶ್ರೀ ಮಹಾದೇವಯ್ಯ ಇವರ ಸೇವೆಯನ್ನು ವಿಲೀನೀಕರಣಗೊಳಿಸುವಂತೆ ಆದೇಶಿಸಿದೆ ಅಥವಾ ಇತಿಹಾಸ ಮತ್ತು ಪ್ರವಾಸೋದ್ಯಮ ವಿಭಾಗಗಳಲ್ಲಿ ಇತಿಹಾಸ ಉಪನ್ಯಾಸಕರ ಹುದ್ದೆಗೆ ಶ್ರೀ ಮಹಾದೇವಯ್ಯ ಇವರ ಸೇವೆಯನ್ನು ವಿಲೀನಕರಣಗೊಳಿಸಬೇಕಾಗಿ ಸರ್ಕಾರ ಮಂಜೂರಾತಿ ಆದೇಶ ನೀಡಲಾಗಿದೆ. ಈ ಮೇಲ್ಕಂಡ ವಿಭಾಗಗಳಲ್ಲಿ ಇತಿಹಾಸ ಉಪನ್ಯಾಸಕರ ಹುದ್ದೆಗೆ ಸದರಿಯವರ ಸೇವೆಯನ್ನು ವಿಲೀನೀಕರಣಗೊಳಿಸುವಲ್ಲಿ ಒಂದು ಪಕ್ಷ ವಿಳಂಬವಾದಲ್ಲಿ ತಕ್ಷಣದಿಂದ ಜಾರಿಗೆ ಬರುವಂತೆ ತತ್ಸಮಾನ ಹುದ್ದೆಯೊಂದಕ್ಕೆ ರಾಜ್ಯ ವೇತನ ಶ್ರೇಣಿಯಲ್ಲಿ ಶ್ರೀ ಮಹಾದೇವಯ್ಯ ಇವರ ಸೇವೆಯನ್ನು ವಿಲೀನೀಕರಣಗೊಳಿಸಿ, ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆದೇಶ ನೀಡಲಾಗಿದೆ.

**ಷರತ್ತುಗಳು:**

1) ಈ ವಿಲೀನೀಕರಣವು ಕಟ್ಟುನಿಟ್ಟಾಗಿ ಕರ್ನಾಟಕ ಶಿಕ್ಷಣ ಇಲಾಖೆಯ ಸೇವೆಗಳಲ್ಲಿ ಅರೆಕಾಲಿಕ ಉಪನ್ಯಾಸಕರಾಗಿ ಕಾರ್ಯ ನಿರ್ವಹಿಸುತ್ತಿರುವ ವ್ಯಕ್ತಿಗಳ ವಿಲೀನಗೊಳಿಸುವಿಕೆ (ಕಾಲೇಜು ಶಿಕ್ಷಣ ಇಲಾಖೆ) (ವಿಶೇಷ) ನಿಯಮಗಳು 1996ರನ್ವಯ ಇರತಕ್ಕದ್ದು ಮತ್ತು ತದನಂತರದ ತಿದ್ದುಪಡಿಗಳಲ್ಲಿ ವಿಧಿಸಿರುವ ಷರತ್ತುಗಳಿಗೆ ಒಳಪಟ್ಟಿದೆ.

2) ಶ್ರೀ ಮಹಾದೇವಯ್ಯ ಎಂ.ಫಿಲ್. ಪಿ.ಹೆಚ್.ಡಿ. ಎನ್‌ಇಟಿ/ ಎಸ್‌ಎಲ್‌ಇಟಿಯಲ್ಲಿ ತೇರ್ಗಡೆ ಹೊಂದಿಲ್ಲದೇ ಇರುವುದರಿಂದ ಅವರು ಯುಜಿಸಿ ವೇತನ ಶ್ರೇಣಿಗೆ ಅರ್ಹರಲ್ಲ. ಆದರೆ ರಾಜ್ಯ ವೇತನ ಶ್ರೇಣಿಯಾದ ರೂ. 11,400–21600ರ ವೇತನ ಶ್ರೇಣಿಯಲ್ಲಿ ಅವರ ವೇತನವನ್ನು ನಿಗಧಿಗೊಳಿಸತಕ್ಕದ್ದು.

3) ಯುಜಿಸಿಯು ಎಂ.ಫಿಲ್. ಪಿ.ಹೆಚ್.ಡಿ., ಎನ್‌ಇಟಿ ಪಾಸು ಮಾಡುವ ಸಂಬಂಧದಲ್ಲಿ ನೀಡಿರುವ ವಿನಾಯಿತಿ ಸೇರಿದಂತೆ ಯುಜಿಸಿ ಪರಿನಿಯಮಾವಳಿಗಳಲ್ಲಿ ನಿರ್ಧಿಷ್ಟಪಡಿಸಿದ ಅರ್ಹತೆಯನ್ನು ಶ್ರೀ ಮಹಾದೇವಯ್ಯ ಇವರು ಪೂರೈಸಿದ ನಂತರ ಅವರ ವೇತನವನ್ನು ರೂ. 8000–13500 ಯುಜಿಸಿ ವೇತನ ಶ್ರೇಣಿಯಲ್ಲಿ ನಿಗಧಿಗೊಳಿಸತಕ್ಕದ್ದು.

4) ಎಂ.ಫಿಲ್, ಪಾಸು ಮಾಡದ ನಾನ್–ಎನ್ಇಟಿ/ಎಸ್ಎಲ್ಇಟಿ ಅಭ್ಯರ್ಥಿಗಳನ್ನು ರೂ. 11,400–21600ರ ರಾಜ್ಯ ವೇತನ ಶ್ರೇಣಿಯಲ್ಲಿ ವಿಲೀನೀಕರಣಗೊಳಿಸತಕ್ಕದ್ದು. ಆದರೆ ಇಂತಹ ಅಭ್ಯರ್ಥಿಯು ಅರ್ಹತಾ ಪರೀಕ್ಷೆಯಲ್ಲಿ ಕನಿಷ್ಠ ಶೇ. 55ರಷ್ಟು ಅಂಕಗಳನ್ನು ತಪ್ಪದೇ ಹೊಂದಿರತಕ್ಕದ್ದು.

5) ವಿಲೀನಗೊಂಡ ಅರೆಕಾಲಿಕ ಉಪನ್ಯಾಸಕರುಗಳು ಎಂ.ಫಿಲ್/ಪಿ.ಹೆಚ್.ಡಿ., ಪಾಸು ಮಾಡಲು ದಿನಾಂಕ 16–9–2009ರವರೆಗೆ ಸರ್ಕಾರ ಕಾಲಾವಕಾಶ ನೀಡಲಾಗಿದೆ. ಈ ಅವಧಿಯಲ್ಲಿ ಅವರು ಎಂ.ಫಿಲ್. ಪಾಸು ಮಾಡಿದ್ದಲ್ಲಿ ಅವರು ಇತರ ಅರ್ಹ ಉಪನ್ಯಾಸಕರಿಗೆ ಲಭ್ಯವಾಗುವ ಯುಜಿಸಿ ವೇತನ ಶ್ರೇಣಿ ಪಡೆಯಲು ಅರ್ಹರಾಗುತ್ತಾರೆ. ಅವರು ಎಂ.ಫಿಲ್. ನಿಗದಿತ ಅವಧಿಯೊಳಗೆ ಪಾಸು ಮಾಡದಿದ್ದಲ್ಲಿ ಇವರನ್ನು ಭಾರತದ ಸರ್ವೋಚ್ಚ ನ್ಯಾಯಾಲಯವು ಎಸ್ಎಲ್ಪಿ (ಸಿವಿಲ್) ಸಂ. 5991/99ಕ್ಕೆ ಸಂಬಂಧಿಸಿದಂತೆ ಸಿವಿಲ್ ಅಪೀಲ್ ಸಂ. 27/2001ರ ಮೇಲೆ ದಿನಾಂಕ 4–1–2001ರಂದು ನೀಡಿದ ತೀರ್ಪಿನನ್ವಯ ಸೇವೆಯಿಂದ ತೆಗೆದು ಹಾಕಲಾಗುವುದು.

6) ಶ್ರೀ ಮಹಾದೇವಯ್ಯ ಇವರು ಪರಿವೀಕ್ಷಣಾ ಅವಧಿಯಲ್ಲಿ 1974ರ ಕ.ಸ.ಸೇ. (ಸೇವಾ ಮತ್ತು ಕನ್ನಡ ಭಾಷೆ ಪರೀಕ್ಷೆಗಳು) ನಿಯಮಾವಳಿಗಳಲ್ಲಿ ನಿಗದಿಪಡಿಸಿರುವ ಕನ್ನಡ ಭಾಷಾ ಮತ್ತು ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು. ಹಾಗೆಯೇ ಇವರು ಒಂದು ತಿಂಗಳ ಓರಿಯೆಂಟೇಷನ್ ಕೋರ್ಸ್ ತರಬೇತಿಯನ್ನು ಕಡ್ಡಾಯವಾಗಿ ಪೂರ್ಣಗೊಳಿಸತಕ್ಕದ್ದು.

7) ಇವರ ಸೇವಾ ಜೇಷ್ಠತೆ ಮೀಸಲಾತಿ ಮತ್ತು ಅರೆಕಾಲಿಕ ಉಪನ್ಯಾಸಕರುಗಳ ಇಂಟರ್–ಸೇ–ಜೇಷ್ಠತಾ ಪಟ್ಟಿಯನ್ನು ಸಿದ್ಧಪಡಿಸಿ, ಪರಿಷ್ಕರಿಸುವ ಬದಲಾವಣೆಗೆ ಒಳಪಟ್ಟಿರುತ್ತದೆ.

8) ಇವರ ನೇಮಕಾತಿಯು ಅರೆಕಾಲಿಕ ಉಪನ್ಯಾಸಕರುಗಳ ಸೇವಾ ವಿಲೀನತೆ ಬಗ್ಗೆ ಬಾಕಿ ಇರುವ/ಉದ್ಭವಿಸಲಿರುವ ನ್ಯಾಯಾಲಯದ ತಕರಾರುಗಳಲ್ಲಿ ನ್ಯಾಯಾಲಯಗಳು ನೀಡಲಿರುವ ತೀರ್ಪಿಗೆ ಬದ್ಧವಾಗಿರುವ ಷರತ್ತಿಗೆ ಒಳಪಟ್ಟಿರುತ್ತದೆ.

9) ಮಂಗಳೂರು ವಿಶ್ವವಿದ್ಯಾಲಯದ ಘಟಕ ಕಾಲೇಜುಗಳ ಪ್ರಾಂಶುಪಾಲರು, (ಮಂಗಳೂರು ಮತ್ತು ಮಡಿಕೇರಿಯ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರ್ಯಪ್ಪ ಕಾಲೇಜು (ಇಂದಿನ ಸರ್ಕಾರಿ ಕಾಲೇಜು)ನ ಪ್ರಾಂಶುಪಾಲರು) ಶ್ರೀ ಮಹಾದೇವಯ್ಯ ಇವರ ವಿದ್ಯಾರ್ಹತೆ, ಜನ್ಮ ದಿನಾಂಕ: ಜಾತಿ/ಮೀಸಲಾತಿ ಇವುಗಳ ಬಗ್ಗೆ ಮೂಲ ದಾಖಲೆಗಳನ್ನು ಪರಿಶೀಲಿಸಿ ಖಾತ್ರಿಪಡಿಸಿಕೊಳ್ಳತಕ್ಕದ್ದು. ಪರಿಶೀಲಿಸಿದ ಬಗ್ಗೆ ದೃಢೀಕರಿಸಿ ಪ್ರಮಾಣ ಪ್ರಪತ್ರವನ್ನು ಅವರ ಸೇವಾ ಪುಸ್ತಕದಲ್ಲಿ ದಾಖಲಿಸತಕ್ಕದ್ದು.

10) ಮೀಸಲಾತಿ ವರ್ಗದಲ್ಲಿ ನೇಮಕಾತಿಗೊಂಡಿರುವ ಅರೆಕಾಲಿಕ ಉಪನ್ಯಾಸಕರುಗಳು ತಮ್ಮ ಜಾತಿ ದೃಢೀಕರಣದ ಬಗ್ಗೆ ಸಕ್ಷಮ ಪ್ರಾಧಿಕಾರದಿಂದ ಪಡೆದ ಜಾರಿ ಸಿಂಧುತ್ವ ಪ್ರಮಾಣ ಪತ್ರವನ್ನು ಕರ್ತವ್ಯ ವರದಿ ಸಲ್ಲಿಸುವಾಗ ಹಾಜರುಪಡಿಸತಕ್ಕದ್ದು ಎಂಬ ಷರತ್ತನ್ನು ತಪ್ಪದೇ ಪಾಲಿಸಬೇಕು.

11) ವಿಲೀನಗೊಂಡ ತಾತ್ಕಾಲಿಕ ಉಪನ್ಯಾಸಕರ ಇಂಟರ್–ಸೇ–ಜೇಷ್ಠತೆಯನ್ನು ಅವರುಗಳು ತಾತ್ಕಾಲಿಕ ಉಪನ್ಯಾಸಕರುಗಳಾಗಿ ಸೇವೆಗೆ ಸೇರಿದ ದಿನಾಂಕವನ್ನು ಉಲ್ಲೇಖವಾಗಿಟ್ಟುಕೊಂಡು ಜೇಷ್ಠತೆಯನ್ನು ನಿರ್ಧರಿಸುವ ಇತರೆ ಅಂಶಗಳನ್ನು ಗಣನೆಗೆ ತೆಗೆದುಕೊಂಡು ನಿರ್ಧರಿಸತಕ್ಕದ್ದು.

ಭಾರತದ ರಾಷ್ಟ್ರಪತಿಯವರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 121

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ಸಂಖ್ಯೆ: ಲಾ 39 ಎಲ್ಎಡಿ 2008, ಬೆಂಗಳೂರು, ದಿನಾಂಕ: 9ನೇ ಮೇ 2008**

**ತಿದ್ದೋಲೆ**

ಸರ್ಕಾರಿ ಆದೇಶ ಸಂಖ್ಯೆ: ಲಾ 39 ಎಲ್ಎಡಿ 2008 ದಿನಾಂಕ 5–5–2008ರ ವಿಳಾಸ ಭಾಗದ ಕ್ರಮ ಸಂಖ್ಯೆ 2 ಹಾಗೂ 3ರಲ್ಲಿರುವ 'ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ ಹಾಗೂ ಜಿಲ್ಲಾ ಖಜಾನೆ ಅಧಿಕಾರಿಗಳು, ಗುಲ್ಬರ್ಗಾ ಜಿಲ್ಲೆ, ಗುಲ್ಬರ್ಗಾ' ಇದರ ಬದಲಾಗಿ ಕ್ರಮವಾಗಿ 'ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು ಜಿಲ್ಲೆ, ಮೈಸೂರು ಹಾಗೂ ಜಿಲ್ಲಾ ಖಜಾನೆ ಅಧಿಕಾರಿಗಳು, ಮೈಸೂರು ಜಿಲ್ಲೆ, ಮೈಸೂರು' ಎಂದು ಓದಿಕೊಳ್ಳಬೇಕಾಗಿ ಕೋರಲಾಗಿದೆ.

ಭಾರತದ ರಾಷ್ಟ್ರಪತಿಗಳ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 796

**ಶಕುಂತಲಾ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),
ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ನಗರಾಭಿವೃದ್ಧಿ ಸಚಿವಾಲಯ**

**ವಿಷಯ :** ರಾಮದುರ್ಗ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಅಂದಾಜು ವೆಚ್ಚ ರೂ. 749.00 ಲಕ್ಷಗಳ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಅಧ್ಯಕ್ಷರು ಮತ್ತು ವ್ಯ.ನಿ. ಕನನಿಸ ಮತ್ತು ಒಚ ಮಂಡಳಿ, ಬೆಂಗಳೂರು ರವರ ಪತ್ರ ಸಂಖ್ಯೆ : ಕಜಮ/ಮುಅ(ಉ)/ಉಮುಅ-1/ತಾಸ-4/ಸ-2/3880/2006-07, ದಿನಾಂಕ 5-3-2007.

**ಪ್ರಸ್ತಾವನೆ :**

ರಾಮದುರ್ಗ ಪಟ್ಟಣವು ಬೆಳಗಾವಿ ಜಿಲ್ಲೆಯ ತಾಲ್ಲೂಕು ಕೇಂದ್ರವಾಗಿದ್ದು, ಮಲ್ಲಪ್ರಭಾ ನದಿಯ ಎಡದಂಡೆಯಲ್ಲಿರುತ್ತದೆ ಮತ್ತು ಬೆಳಗಾವಿಯಿಂದ 100 ಕಿ.ಮೀ. ದೂರದಲ್ಲಿದೆ. ಈ ಪಟ್ಟಣದ ಜನಸಂಖ್ಯೆ 2001ರ ಜನಗಣತಿ ಪ್ರಕಾರ 31,827 ಇದ್ದು ಈಗಿನ ಜನಸಂಖ್ಯೆ 34,000 ಇರುತ್ತದೆ. ಪ್ರಸ್ತುತ ಈ ಪಟ್ಟಣಕ್ಕೆ ನೀರು ಸರಬರಾಜು ಯೋಜನೆಯನ್ನು, ಮಲ್ಲಪ್ರಭಾ ನದಿಯಿಂದ 2004ರಲ್ಲಿ ಚಾಲನೆಗೊಳಿಸಿ, ಪುರಸಭೆಗೆ ನಿರ್ವಹಣೆಗಾಗಿ ಹಸ್ತಾಂತರಿಸಲಾಗಿದ್ದು ಹಾಗೂ ತಲಾ ದಿನಂಪ್ರತಿ 100 ಲೀಟರ್‌ನಂತೆ ನೀರಿನ ಪ್ರಮಾಣವನ್ನು ಸರಬರಾಜು ಮಾಡಲಾಗುತ್ತಿದೆ. ಈ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಇರುವುದಿಲ್ಲ. ಪಟ್ಟಣದ ಗ್ರಾಮಸಾರವು ತೆರೆದ ನಾಲೆಗಳ ಮುಖಾಂತರ ಹರಿದು, ಮಲ್ಲಾಪ್ರಭಾ ನದಿಯ ನೀರು ಕಲುಷಿತಗೊಳ್ಳುತ್ತಿದೆ.

ಮೇಲಿನ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ರಾಮದುರ್ಗ ಪಟ್ಟಣಕ್ಕೆ ಒಳಚರಂಡಿ ಯೋಜನೆಯ ಅಂದಾಜು ಪಟ್ಟಿಯನ್ನು ಮಂಡಳಿಯ ಮತ್ತು ಲೋಕೋಪಯೋಗಿ ಇಲಾಖೆಯ 2006-07 ದರಪಟ್ಟಿಗಳನ್ನಾಧರಿಸಿ, ರೂ. 749.00 ಲಕ್ಷಗಳಿಗೆ ತಯಾರಿಸಲಾಗಿದ್ದು ಈ ಕೆಳಕಂಡ ಆರ್ಥಿಕ ಮಾದರಿಯಲ್ಲಿ ಯೋಜನೆಯನ್ನು ಕೈಗೆತ್ತಿಕೊಳ್ಳಲು ಹಾಗೂ ಆಡಳಿತಾತ್ಮಕ ಅನುಮೋದನೆ ನೀಡಲು ಕೋರಿ ಅಧ್ಯಕ್ಷರು ಮತ್ತು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯವರು, ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

| | | |
|---|---|---|
| ಆರ್ಥಿಕ ಸಂಸ್ಥೆಗಳಿಂದ ಸಾಲ | 50% | ರೂ. 374.50 ಲಕ್ಷಗಳು |
| ಸರ್ಕಾರದಿಂದ ಸಾಲ | 30% | ರೂ. 224.70 ಲಕ್ಷಗಳು |
| ಸ್ಥಳೀಯ ಸಂಸ್ಥೆಯ ವಂತಿಕೆ | 20% | ರೂ. 149.80 ಲಕ್ಷಗಳು |
| | **ಒಟ್ಟು** | **ರೂ. 749.00 ಲಕ್ಷಗಳು** |

ಈ ಯೋಜನೆಗೆ 2007-08ನೇ ಸಾಲಿನ ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಅನುಮೋದಿತ ಕ್ರಿಯಾ ಯೋಜನೆಯಲ್ಲಿ ರೂ. 249.00 ಲಕ್ಷಗಳನ್ನು ಅನುವು ಮಾಡಲಾಗಿದೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ನಅಇ 4 ಯುಡಿಎಸ್ 2007, ಬೆಂಗಳೂರು, ದಿನಾಂಕ: 29ನೇ ಡಿಸೆಂಬರ್ 2007**.

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಮದುರ್ಗ ಪಟ್ಟಣಕ್ಕೆ ಒಳಚರಂಡಿ ವ್ಯವಸ್ಥೆ ಕಲ್ಪಿಸುವ ಅಂದಾಜು ವೆಚ್ಚ ರೂ. 749.00 ಲಕ್ಷಗಳ ಯೋಜನೆಯನ್ನು ಕರ್ನಾಟಕ ನಗರ ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯು ಒಳಚರಂಡಿ ಯೋಜನೆಯಡಿ ಕೈಗೆತ್ತಿಕೊಳ್ಳಲು ಈ ಕೆಳಕಂಡ ಷರತ್ತು ಮತ್ತು ನಿಬಂಧನೆಗೊಳಪಟ್ಟು ಆಡಳಿತಾತ್ಮಕ ಅನುಮೋದನೆಯನ್ನು ನೀಡಿದೆ.

(1) As the escalation cost for 2 years at 6% p.a. has already been factored, no escalation or tender premium will be allowed.

(2) Borrowings from FIS will not be given Government guarantee.

(3) The O & M will be by imposing user charged on the end users or by ULB.

(4) The project should be completed within a time frame. In case there is an escalation, it will be borne out of the ULB funds or by other contributors, except the GOK share, which will not be increased.

(5) Thus, additionality shall not be entertained.

(6) ಸದರಿ ಕಾಮಗಾರಿಯನ್ನು ಕೈಗೊಳ್ಳುವಾಗ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಅಧಿನಿಯಮ 1999 ಮತ್ತು ನಿಯಮ 2000ನ್ನು ಪಾಲಿಸುವುದು.

(7) ಅಂದಾಜು ಪರಿಷ್ಕರಣೆಗೆ ಯಾವುದೇ ಅವಕಾಶ ನೀಡತಕ್ಕದ್ದಲ್ಲ.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ FD 534 Exp-9/2007, ದಿನಾಂಕ 7-9-2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಭಾರತದ ರಾಷ್ಟ್ರಾಧ್ಯಕ್ಷರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 64

**ಸಿ.ಟಿ. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ನಗರಾಭಿವೃದ್ಧಿ ಇಲಾಖೆ